


# ಅಪೂರ್ವ ಸಂಗಮ

ಕಥಾ ಸಂಕಲನ

ಕಟ್ರತನ ಲಲಿತಾ ಅಯ್ಯಣ್ಣ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



# ಅಪೂರ್ವ ಸಂಗಮ

ಕಥಾ ಸಂಕಲನ

ಬರ್ದವು
**ಕಟ್ರತನ ಲಲಿತಾ ಅಯ್ಯಣ್ಣ**
ಗೌಳಿಬೀದಿ, ಮಡಿಕೇರಿ.
ಮೊ : 7204675925

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**
**ಮಡಿಕೇರಿ, ಕೊಡಗು ಜಿಲ್ಲೆ – 571 201**

**'APOORVA SANGAMA'** Arebhashe Katha Sankalana in Arebhase language written by Katratana Lalitha Aiyanna, Published by 'Karnataka Arebhase Samskrithi Mathu Sahitya Academy.

ಪ್ರಕಟಣೆ **: 2019**

ಪ್ರತಿಗಳು **: 500**

**ಬೆಲೆ :** ರೂ. 100/- Price : Rs. 100/-

**ಪುಟಗಳು :** 112





ಪ್ರಕಾಶಕರು : **ರಿಜಿಸ್ಟ್ರಾರ್**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ.

**ಪುಸ್ತಕ ದೊರೆಯುವ ಸ್ಥಳ :**

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,
ಕಾಫಿ ಕೃಪ ಬಿಲ್ಡಿಂಗ್, ಮಹಾತ್ಮ ಗಾಂಧಿ ರಸ್ತೆ, ಮಡಿಕೇರಿ.
ದೂ. : 08272–223055

ಮುದ್ರಣ :

ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,
ಮಡಿಕೇರಿ, ಕೊಡಗು
Ph : 08272-224919, 9448135592

# ಅಧ್ಯಕ್ಷರ ಮಾತ್

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಕಲೆ, ಸಾಹಿತ್ಯ ಮತ್ತೆ ಅರೆಭಾಷೆ ಸಂಸ್ಕೃತಿ ಕ್ಷೇತ್ರಲಿ ಸೃಜನಶೀಲ ಕೆಲ್ಸಗಳಿಗೆ ಪ್ರೋತ್ಸಾಹ ಕೊಡ್ದು ಸರಕಾರದ ಉದ್ದೇಶ. ಆ ಉದ್ದೇಶನ ಸಫಲ ಮಾಡ್ದು ನಮ್ಮ ಕೆಲ್ಸ. ಇದೇ ಕಾರಣಂದ ಅರೆಭಾಷೆಲಿ ಪುಸ್ತಕ ಬರ್ಯೆವುಕೆ ಪ್ರೋತ್ಸಾಹ ಕೊಟ್ಟ್ ಅವರ ಆಯ್ದ ಪುಸ್ತಕನ ಮುದ್ರಣ ಮಾಡಿ ಲೋಕಾರ್ಪಣೆ ಮಾಡುವ ಕೆಲ್ಸನ ಅಕಾಡೆಮಿ ಮಾಡ್ತಾ ಉಟ್ಟು.

'ಅಪೂರ್ವ ಸಂಗಮ'ತ್ತೇಳುವ ಕಥಾ ಸಂಕಲನ ಶ್ರೀಮತಿ ಕಟ್ರತನ ಲಲಿತಾ ಅಯ್ಯಣ್ಣನವು ಬರ್ದೊಳೊ. ಈ ಹಿಂದೆ ಅವು 'ಮತ್ತೆ ಸಿಕ್ಕಿತ್ ಕುಂಕುಮ'ತ್ತೇಳುವ ಕಾದಂಬರಿನ ಬರ್ದ್ ಅಕಾಡೆಮಿ ಮೂಲಕ ಅದ್ ಬೆಳ್ಕ್ ಕಂಡುಟು. ಈಗ ಅಪೂರ್ವ ಸಂಗಮ ಕಥಾ ಸಂಕಲನ ಅಕಾಡೆಮಿ ಮುದ್ರಣ ಮಾಡಿಕೆ ಮುಂದೆ ಬಂದುಟು.

ಈ ಹಿಂದೆನ ಸಮಿತಿ ಮತ್ತೆ ಈಗನ ಸಮಿತಿ ಸೇರಿ ಇಲ್ಲಿಮುಟ್ಟ ಬೇರೆ ಬೇರೆ ರೀತಿಯ ಇಪ್ಪತ್ನಾಲ್ಕ್ ಪುಸ್ತಕಗಳ ಲೋಕಾರ್ಪಣೆ ಮಾಡಿಟು. ಸರಕಾರಂದ ನೋಂದಾವಣೆ ಆದ ಮೇಲೆ ಅಕಾಡೆಮಿ 'ಹಿಂಗಾರ'ತ್ತೇಳು ತ್ರೈ ಮಾಸಿಕದ ಹತ್ತ್ ಆವೃತಿಗಳ ಹೊರ ತಂದುಟು.

ಇದೀಗ ಶ್ರೀಮತಿ ಲಲಿತಾ ಅಯ್ಯಣ್ಣನವು ಬರ್ದ 'ಅಪೂರ್ವ ಸಂಗಮ'ತ್ತೇಳುವ ಕಥಾ ಸಂಕಲನ ಓದುಗರಾದ ನಿಮ್ಮ ಕೈ ಮೇಲೆ ಇಸ್ತಾ ಒಳೊ. ಇದೊಂದು ಸಂಸಾರದ ಚಿತ್ರಣ ಕೊಡುವ ಕೃತಿ. ಮಾನ್ಯ ಓದುಗರಾದ ನೀವು ಈ ಕೃತಿನ ಓದಿ ಪ್ರೋತ್ಸಾಹ ಕೊಡುವರಿತ ನಾವು ಭಾವಿಸಿಯೊಳೊ. ಅಕಾಡೆಮಿ ಮೂಲಕ ಪ್ರಕಟ ಆಗ್ತಿದ್ದರ್‌ಂದ ಈ ಪುಸ್ತಕ ಕಮ್ಮಿ ಕ್ರಯಕೆ ನಿಮಿಗೆ ಸಿಕ್ಕಿದೆ.

ಈ ಪುಸ್ತಕನ ಪ್ರಕಟ ಮಾಡಿಕೆ ಅನುಮತಿ ಕೊಟ್ಟ ಕಥೆಗಾರ್ತಿ ಶ್ರೀಮತಿ ಕಟ್ರತನ ಲಲಿತಾ ಅಯ್ಯಣ್ಣನವ್ಕೆ ಧನ್ಯವಾದಗ. ಪುಸ್ತಕ ಪ್ರಕಟಣಾ ಸಮಿತಿನ ಸಂಚಾಲಕರಾದ ಬಾರಿಯಂಡ ಜೋಯಪ್ಪನವುಕೆ ಮತ್ತೆ ಸಲಹಾ ಸಮಿತಿನ ಸದಸ್ಯರಿಗೆ ಅಕಾಡೆಮಿ ಋಣಿ ಆಗುಟು. ಪುಸ್ತಕ ತಕಂಡ್ ಓದುವ ಸಾಹಿತ್ಯಾಸಕ್ತರಾದ ನಿಮಿಗೆ ಧನ್ಯವಾದಗ.

**ಪಿ. ಸಿ. ಜಯರಾಮ**
ಅಧ್ಯಕ್ಷರ್.

25–07–2019

# ಮುನ್ನುಡಿ

ಶ್ರೀಮತಿ ಕಟ್ರತನ ಲಲಿತಾ ಅಯ್ಯಣ್ಣನವು 2016ರ್‌ಲಿ "ಮತ್ತೆ ಸಿಕ್ಕಿತ್ ಕುಂಕುಮ"ತ್ತೇಳುವ ಕಾದಂಬರಿನ ಬರ್ದ್ ಹೆಸ್ರ್ ಮಾಡ್ದವು. ಆ ಪುಸ್ತಕನ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಪ್ರಕಟಿಸಿ ಓದುಗರ ಕೈಲಿ ಇಸಿತ್. ಇದೀಗ ಅಪೂರ್ವ ಸಂಗಮತ್ತೇಳುವ ಕಥಾ ಸಂಕಲನ ಬರ್ದ್ ಆಸಕ್ತ ಓದುಗಂಗೆ ಮತ್ತೊಂದ್ ಅವಕಾಶನ ಲಲಿತಾ ಅಯ್ಯಣ್ಣನವು ಮಾಡಿಕೊಟ್ಟೊಳೊ. ಇದ್ ಅರೆಭಾಷೆ ಸಾಹಿತ್ಯಾಸಕ್ತರ ಭಾಗ್ಯತೇ ಹೇಳಕ್. ಶ್ರೀಮತಿ ಲಲಿತಾ ಅಯ್ಯಣ್ಣನವ್ಕೆ ಅಭಿನಂದನೆಗ.

"ಅಪೂರ್ವ ಸಂಗಮ" ಕಥಾ ಸಂಕಲನಲಿ ಒಟ್ಟು ಹತ್ತ್ ಕಥೆಗ ಒಳೊ. ಅವರ ಎಲ್ಲಾ ಕಥೆಗಳೂ ಸಂಸಾರ ಜೀವನದ ಕಥೆಗಳೇ ಆಗೊಳೊ. ಮಕ್ಕಳಿಗೆ ಯವ್ವನ ಬಾಕನ ಹೆತ್ತವು ಒಮ್ಮೆ ಮಕ್ಕಳ ಮೊದುವೆ ಆಗಿದ್ದರೆ...ತ್ತೇಳುವ ಚಿಂತೆಲಿದ್ದವೆ. ಆದರೆ ಅವ್ಕಿಂತಲೂ ಯಾರ್‍ಯಾರಿಗೋ "ಈ ಇನ್ನೂ ಯಾರು ಬಾತ್ಲೆ... ಬೇಗ ಬೇಗ ನೋಡಿ ಮೊದುವೆ ಮಾಡಿಯಪ್ಪಾ..."ತ್ತೇಳುವ ಪಕ್ಸಟೆ ಸಲಹೆ ಕೊಡುವ ಚಿಂತೆ. ಅಷ್ಟೆ ಅಲ್ಲ, ನಂಟ ಬಾಕನ ಅಡ್ಡ ನಿತ್ತ್ ಹಿಂದಕೆ ಕಳ್ಸುವ ಅವು ಇವೂ ಇದ್ದವೆ.

ಹೆತ್ತವ್ಕೆ ಗೊತ್ತು ಹೆರಿಗೆ ಬೇನೆ. ಹೊತ್ತವ್ಕೆ ಗೊತ್ತು ಹೊತ್ತ ಭಾರ. "ಅಪೂರ್ವ ಸಂಗಮ" ಕಥಾ ಸಂಕಲನದ ಕೆಲವು ಕತೆಗ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ ತ್ರೈಮಾಸಿಕ 'ಹಿಂಗಾರ' ಪುಸ್ತಕಲಿ ಪ್ರಕಟ ಆಗುಟು. ಶ್ರೀಮತಿ ಲಲಿತ ಅವರ ಕತೆಗಳ ವಿಶೇಷತ್ತೇಳ್ರೆ 'ಪತ್ತೆದಾರಿಕೆ'! ಕುತೂಹಲಂದ ಓದಿಸಿಕಂಡ್ ಹೋವ ತಂತ್ರ!

ಓದುದೆಲ್ಲಾ ಆದ ಮೇಲೆ ಕೆಲ್ಸಕೆ ಸೇರ್‍ದು, ಕೆಲ್ಸಕೆಲ್ಲಾ ಸೇರ್‍ದ ಮೇಲೆ ಮೊದುವೆ ಆದು, ಗಂಡ ಹೆಣ್ಣ್ ಡ್ಯೂಟಿಗೆ ಹೋಕನ ಕೂಸುನ ನೋಡಿಕಂಬವು ಯಾರ್? ಇದ್ ಇಂದ್ ಕಾಂಬ ಕೆಲವು ಕುಟುಂಬಗಳ ಸಮಸ್ಯೆ. ಅದರ ಒಟ್ಟಿಗೆ ಇಳಿ ಪ್ರಾಯಲಿ ಅಪ್ಪ ಅವ್ವನ ನೋಡಿಕಂಬವು ಯಾರ್? ಅವ್ಕೆ ವೃದ್ಧಾಶ್ರಮನೇ ಗತಿ! ಇಂದ್‌ನ ಕೆಲವುರ ಬರಹಗಳ್ಲಿ ಇಂಥ ಸಮಸ್ಯೆಗಳ್ನೇ ಕಾಂಬಕ್!

"...... ಸ್ವಾತಿನ ಪೊರ್ಲು ನೋಡಿ ಮದ್ವೆ ಆಗಿದ್ದ ಅವಂಗೆ ಅವ್ಳ ರೂಪ ಕಮ್ಮಿ ಆದ ಮ್ಯಾಲೆ ಅವ್ಳ ಮ್ಯಾಲೆ ಯಾವುದೇ ಪ್ರೀತಿ ಉಳ್ದಿತ್ತ್‌ಲೆ. ಇದ್‌ಕೆ ಅಂವನ ಅಮ್ಮನ ಕುಮ್ಮಕ್ಕೂ ಇತ್ತ್..." 'ಅಪೂರ್ವ ಸಂಗಮ'ತ್ತೇಳುವ

ಕತೆ ಹಿಂಗೇ ಮುಂದ್‌ವರ್ದದೆ. ಕಡೆಲಿ ಏನಾತ್‌ತ್ತೇಳ್ವ ಕುತೂಹಲ ಓದುಗನಲ್ಲಿ ಮೂಡ್ದೆ. ಸಹಜವಾಗಿ ಮೂಡಿ ಬಂದ ಕತೆ ಇದಾಗುಟ್ಟು.

"ಮಿಂಚಿದ ಕಾಲ" ಕತೆ ಸುರಾದೇ ಆಟಿತಿಂಗದ ಮಳೆಗಾಲಂದ. "ಹೊಟ್ಟೆ ಬಟ್ಟೆ ಕಟ್ಟಿ ಇವನ ಓದ್ಸಿದೊ. ಈಗ ನೋಡು ಇಂವ ಇರಕಾದ ಜಾಗಲಿ ಅಮ್ಮನ ಬುಟ್ಟುಟ್ಟು, ಸ್ವಂತ ಮಂಜ ಆದರೆ ಹಿಂಗೆ ಮಾಡಿರ್ದಾ... ಥೂ ಪಾಪಿ" ಕರುಣಾಜನಕ ಕತೆ ಇದಾಗುಟ್ಟು.

"ಮೂಲ ನಕ್ಷತ್ರ"ತೇಳ್ಕನ ಮೂಗು ಮುರೆವೇ ಜಾಸ್ತಿ. ಕೆಲವಂತೂ ಬರೀ ದೋಷ ಹುಡ್ಕಿಕಂಡ್ ಹಾಳಾಗೊಳೊ. ಸಮಾಜಲಿ ಸುಧಾರಣೆ ಕಾಂಬೊದು ಯಾಗೊಳೊ ಏನೊ? ಮೂಲ ನಕ್ಷತ್ರತ್ತೇಳುವ ಈ ಕತೆ ಈ ಮೇಲೆನ ಪ್ರಶ್ನೆಗೆ ಉತ್ತರ ಕೊಡುವಾಂಗೆ ಉಟ್ಟು.

'ಸೇಡ್' ಕತೆಲಿ ಕಾಲೇಜ್ ಜೀವ್ನಂದಳೇ ಸುರಾದ ಕಿಚ್ಚ್ ಹಂಗೇ ಮುಂದುವರ್ದ್ ಮತ್ತೆ ಯಾಗೊಳೋ ಸ್ಫೋಟ ಹೆಂಗಾತ್ ಮತ್ತೆ ಏನಾತ್‌ನ ವಿವರ ಆ ಕತೆಲಿ ಸಿಕ್ಕಿದೆ.

'ಹುಚ್ಚ' ಯಾಕಾತ್? ಕಡೆಗೆ ಏನಾತ್‌ತೇಳುವ ಕತೆ ಮನೋಜ್ಞ ಆಗಿ ಮೂಡಿ ಬಂದುಟು. 'ಸಂಶಯದ ಸುಳಿಲಿ' ಕತೆ 'ಪತ್ತೆದಾರಿ' ಕಾದಂಬರಿನ ಗ್ಯಾನ ಮಾಡ್ಸಿದೆ. 'ಪರಿವರ್ತನೆ' ಕತೆ ಚಟಕೆ ಬಿದ್ದರೆ ಏನಾದವೆತ ಹೇಳ್ವ ಕತೆಯಾಗುಟು.

"ಅರಿವು ಮೂಡಿತ್ತ್" ಈ ಪುಸ್ತಕದ ಕಡೇ ಕತೆ. ಆದರ್ಶ ಬದ್ಕ್‌ನ ಬದ್ಕಿಕೆ ಪ್ರಯತ್ನ ಪಟ್ಟರೆ ಕೆಲವ್ ಸೋತವೆ, ಮತ್ತೆ ಕೆಲವ್ ಸೋತ್ ಗೆದ್ದವೆ.

ಶ್ರೀಮತಿ ಕಟ್ರತನ ಲಲಿತಾ ಅಯ್ಯಣ್ಣ ಅವ್ರಂದ 'ಸಮಾಜ ಮುಖಿ' ಆಶಯದ ಕತೆಗ ಇನ್ನೂ ಮೂಡಿ ಬರ್ಲಿತ ಬಯ್ಸನೊ. ಕತೆ ಬರೆವ ತಂತ್ರ ಕತೆಗಾರ್ತಿಗೆ ಒಗ್ಗಿಟು.

ಶ್ರೀಮತಿ ಲಲಿತಾ ಅಯ್ಯಣ್ಣನವ್ಕೆ ಶುಭಾಶಯಗ.

**ಬಾರಿಯಂಡ ಜೋಯಪ್ಪ**

ಸಂಚಾಲಕರ್, ಪುಸ್ತಕ ಪ್ರಕಟಣಾ ಸಮಿತಿ,

ಕರ್ನಾಟಕ ಅರೆಭಾಷೆ ಸಂಸ್ಕೃತಿ & ಸಾಹಿತ್ಯ ಅಕಾಡೆಮಿ,

ಮಡಿಕೇರಿ.

25–07–2019.

# ಲೇಖಕರ ಮಾತ್

"ಅಪೂರ್ವ ಸಂಗಮ" ಕಥಾ ಸಂಕಲನ ಇದ್ ನನ್ನ ಎರಡನೇ ಪ್ರಕಟಿತ ಕೃತಿ. ನನ್ನ ಮೊದಲನೇ ಪುಸ್ತಕ "ಮತ್ತೆ ಸಿಕ್ಕಿತ್ ಕುಂಕುಮ" ಕಾದಂಬರಿ 2016ರಲ್ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಂದ ಪ್ರಕಟ ಆಗುಟ್ಟು. ಇದಲ್ಲದೆ ನನ್ನ ಹಲವು ಕವನ ಮತ್ತಿತರ ಲೇಖನಗ ಪತ್ರಿಕೆಗಳಲ್ಲಿ ಪ್ರಕಟ ಆಗುಟ್ಟು. ನನ್ನ ಈ ಕೃತಿನ ಪ್ರಕಟಿಸ್ತಾ ಇರ್ವ ಅರೆಭಾಷೆ ಅಕಾಡೆಮಿಯ ಅಧ್ಯಕ್ಷರ್, ರಿಜಿಸ್ಟ್ರಾರ್, ಪುಸ್ತಕ ಪ್ರಕಟಣಾ ಸಮಿತಿನ ಸಂಚಾಲಕರ್, ಸಮಿತಿನ ಸದಸ್ಯರ್ ಮತ್ತೆ ಅಕಾಡೆಮಿನ ಎಲ್ಲಾ ಸದಸ್ಯರ್ ಅಲ್ಲದೆ ಸಿಬ್ಬಂದಿಗಳಿಗೆ ಧನ್ಯವಾದಗಳ್ನ ಅರ್ಪಿಸಿನೆ.

'ಅಪೂರ್ವ ಸಂಗಮ' ಕಥಾ ಸಂಕಲನಲಿ ಬರುವ ಕೆಲವು ಕತೆಗ ನಾನ್ ನಿಜ ಜೀವನಲಿ ಕಂಡ ಕೆಲವು ಘಟನೆಗಳಿಗೆ ತೀರಾ ಹತ್ತಿರವಾಗುಟ್ಟು. ನನ್ನ ಪುಸ್ತಕನ ಕೊಂಡು ಓದಿ ನನ್ನ ಬರವಣಿಗೆಗೆ ಸಂಬಂಧಪಟ್ಟಂಗೆ ಸಲಹೆ, ಸೂಚನೆ, ಪ್ರೋತ್ಸಾಹ ನೀಡಿ ಹರಸಿ.

–ಕಟ್ರತನ ಲಲಿತಾ ಅಯ್ಯಣ್ಣ

ಗೌಳಿಬೀದಿ, ಮಡಿಕೇರಿ

ಮೊ : 7204675925

# ಒಳಪುಟಲಿ

# ಅಪೂರ್ವ ಸಂಗಮ

**ಸ್ವಾತಿಗೆ** ಸಂಭ್ರಮವೋ ಸಂಭ್ರಮ. ಮನೆಲಿ ನಾಳೆ ಅಣ್ಣ ಸಮರ್ಥ್‌ನ ಮದ್ವೆ ಚಪ್ಪರ. ನೆಂಟರಿಷ್ಟರ್ ಇಂದೇ ಬಾಕೆ ಶುರು ಮಾಡಿದ್ದೊ. ಮನೆ ಮುಂದೆ ಚಪ್ಪರ ಹಾಕಿಕೆ ಮನೆಯವು ಎಲ್ಲಾ ಬಂದಿದ್ದೊ.

ಬೆಳಿಗ್ಗೆಂದನೇ ಅವ್ಕೆಲ್ಲಾ ಕಾಫಿ ತಿಂಡಿ ಕೊಡ್ದು, ಅವು ಕೇಳ್ದ ಸಾಮಾನ್‌ನೆಲ್ಲಾ ತಕಂಡ್ ಹೋಗಿ ಕೊಡ್ದು, ಹಿಂಗೆ ಸ್ವಾತಿ ಕುಶೀಲಿ ಮನೆ ತುಂಬಾ ಓಡಾಡಿಕಂಡಿತ್ತ್.

ಅವಳ್ನ ಕಂಡ್ರೆ ಮನೆಯವ್ಕೆ ಬಾಳಾ ಇಷ್ಟ. ಅವ್ಳು ಎಲ್ಲಾರೊಟ್ಟಿಗೆ ತಮಾಸೆ ಮಾಡಿಕಂಡ್ ನಗಾಡ್ಸಿಕಂಡ್ ಇರ್‌ತ್ತಿತ್ತ್. ತಾನ್ ಡಾಕ್ಟರ್ ತೇಳ್ವ ಗರ್ವ ಇತ್ತ್‌ಲೆ.

ಶಾರದ ಮತ್ತೆ ಮಂದಪ್ಪನವ್ಕೆ ಸಮರ್ಥ್ ಮತ್ತೆ ಸ್ವಾತಿ ಇಬ್ಬರ್ ಮುತ್ತಿನಂತ ಮಕ್ಕ. ಸಮರ್ಥ್ ಇಂಜಿನಿಯರಿಂಗ್ ಮುಗ್ಸಿ ಬೆಂಗಳೂರ್‌ಲಿ ಒಂದ್ ಕಂಪೆನಿಲಿ ಕೆಲ್ಸ ಮಾಡ್ತಿತ್ತ್. ಸ್ವಾತಿ ಮಂಗಳೂರ್‌ಲಿ ಎಂ.ಬಿ.ಬಿ.ಎಸ್ ಫೈನಲ್ ಇಯರ್ ಓದಿಕಂಡಿತ್ತ್. ಕಳ್ದ ತಿಂಗ ತಾನೆ ಫೈನಲ್ ಇಯರ್ ಪರೀಕ್ಷೆ ಬರ್ದ್ ಬಂದಿತ್ತ್.

ಸ್ವಾತಿಗೆ ಒಂದ್ ಕಡೆ ಕುಶಿ ಅಣ್ಣನ ಮದ್ವೆತ. ಇನ್ನೊಂದ್ ಕಡೆ ಸ್ವಲ್ಪ ಟೆನ್ಶನ್. ಅವ್ಳ ಎಂ.ಬಿ.ಬಿ.ಎಸ್.

ರಿಸಲ್ಟ್ ಇನ್ನ್ ಎರ್ಡ್ ದಿನಲಿ ಬಂದದೆತ ಗೊತ್ತಾಗಿತ್ತ್. ಪರೀಕ್ಷೆಲಿ ಲಾಯ್ಕ ಮಾಡಿದ್ದರೂ ಯಾಕೊ ಸ್ವಲ್ಪ ಅಳುಕಿತ್ತ್. ಅವ್ಳು ಮುಂದೆ ಎಂ.ಡಿ. ಮಾಡಕುತ ಬಾಳಾ ಆಶೆಲಿ ಇತ್ತ್. ಆದ್ರಂದ ಅವ್ಳಿಗೆ ವಳ್ಳ ಪರ್ಸೆಂಟೇಜ್ ಸಿಕ್ಕುದು ಬಾಳಾ ಮುಖ್ಯ ಆಗಿತ್ತ್.

"ಸ್ವಾತಿ, ಏನ್ ಮಾಡ್ತಾ ವಳಾ ಬಾ ಇಲ್ಲಿ" ಶಾರದ ವಳಗಿಂದ ಕರಿಯಕನ ಸ್ವಾತಿ ಅವ್ಳ ಯೋಚನೆಗಳ್‌ಂದ ಹೊರಗೆ ಬಾತ್.

"ಬಂದೆ ಅಮ್ಮಾ" ತೇಳಿ ವಳಗೆ ಹೋತ್.

ಅಮ್ಮನೊಟ್ಟಿಗೆ ಸಮರ್ಥ್ ಮಾತಾಡಿಕಂಡ್ ನಿತ್ತಿತ್. ಸ್ವಾತಿನ ಕಾಂಬಕನ

"ಏಯ್ ಸ್ವಾತಿ, ಇನ್ನ್ ಎರ್ಡ್ ದಿನ ನಿನ್ನ ಮೊಬೈಲ್ ಬಂದ್, ಬಾ ಬಾ ಕೆಲ್ಸ ಮಾಡ್"ತೇಳಿ ಅಣ್ಣ ಸಮರ್ಥ್ ಅವ್ಳ ತಲೆಗೆ ಮೆಲ್ಲೆ ಕುಟ್ಟಿತ್.

"ಏಯ್ ಹೋಗೊ ಮದ್ವೆ ನಿಂದೊ ನಂದೊ, ಈಗಳೇ ದರ್ಬಾರ್ ಮಾಡಿಕೆ ಬಂದ್‌ಬುಟ್ಟಾ, ನಾಳೆ ಅತ್ತಿಗೆ ಬಂದ ಮ್ಯಾಲೆ ನಾವೆಲ್ಲಾ ಕಾಂಬದೇ ಇಲ್ಲೇನೊ"

"ಹೋಗೇ ಹಂಗೇನಿಲ್ಲೆ, ನೀನ್ ನನ್ನ ಮುದ್ದ್ ತಂಗೆ ಅಲಾ"

"ಎಲ್ಲಾ ಹಂಗೆ ಕಾರ್ಯವಾಸಿ ಕತ್ತೆಕಾಲು ಹಿಡಿಯದೂತ, ಅತ್ತಿಗೆ ಬಂದ ಮ್ಯಾಲೆ ನಾನ್ ಇಬ್ಬರ ಮಧ್ಯೆ ಶಿವಪೂಜೆಲಿ ಕರಡಿನಂಗೆ ಆಗಿ ಬಿಟ್ನೆತ ಕಂಡದೆ."

"ಹಂಗೇನ್ ಇಲ್ಲೆ. ನಿನ್ನ ಅತ್ತಿಗೆ ಬಾಳಾ ವಳ್ಳೆಯವ್ಳು"

"ಓಹೋ, ಈಗಳೇ ಬಾರಿ ಸಪೋರ್ಟ್ ಮಾಡ್ತಾವಳಾ ಇನ್ನ್ ದೇವ್ರೇ... ಗತಿ"ತ ಮೇಲೆ ನೋಡಿ ಕೈ ಮುಗ್ತ್ ಸ್ವಾತಿ.

"ಶುರಾತ ನಿಮ್ಮ ಕೋಳಿ ಜಗಳ. ನಾಳೆ ನೀನೂ ಹಂಗೆ ಮದ್ವೆ ಆದ ಮ್ಯಾಲೆ"

"ನೀನೂ ಅಣ್ಣನ ಕಡೆ ಸೇರಿ ಬುಟ್ಟಾ"

ಸಮರ್ಥ್ ಶರ್ಟ್ ಕಾಲರ್ ಎತ್ತಿ, 'ನನ್ನ ಮುದ್ದು ಅಮ್ಮತ, ಅಮ್ಮನ ತಬ್ಬಿ ಕಣ್ತ್"

"ಸರಿ ಸರಿ ನೀನೀಗ ಹೋಗ್. ನಾಳೆಗೆ ಎಲ್ಲಾ ರೆಡಿ ಮಾಡಿಕ ನಮಿಗೆ ಕೆಲ್ಸ ಉಟ್ಟು"

"ಸರಿ ಅಮ್ಮ"

ಸ್ವಾತಿ ಅಮ್ಮನೊಟ್ಟಿಗೆ ಕೆಲ್ಸಕ್ಕೆ ಸೇರಿಕಣ್ತ್.

ವಳಗೆ ಊಟದ ಹಾಲ್‌ಲಿ ಮನೆಯವು, ಅತ್ತೆಕ, ಎಲ್ಲಾ ಆಗಲೇ ಬಂದ್

ಪಟ್ಟಾಂಗ ಹೊಡ್ಕಂಡ್ ಕೆಲ್ಸ ಶುರು ಮಾಡಿದ್ದೊ.

ಕಾಸ್ ತಾಳಿ ಕಟ್ಟಿ ಮದ್ವೆ ಶುರವಾಗುವಲ್ಲಿಂದ ಹಿಡ್ದ್, ಎಣ್ಣೆ ಅರಿಶಿಣಕೆ, ಗಂಗೆ ಪೂಜೆಗೆ, ಆರತಿಗೆ, ಕಂಚಿಮಿಗೆ, ಹಸೆ ಬರಿಯಕೆ, ಹಾಲು ತುಪ್ಪ ಶಾಸ್ತ್ರಕ್ಕೆ, ಮದರಂಗಿ ಶಾಸ್ತ್ರಕೆತೇಳಿ ಎಲ್ಲಾ ಬ್ಯಾರೆ ಬ್ಯಾರೆ ಪಚ್ಚೆಲಿ ಸಾಮಾನ್ ತುಂಬ್ಸಿ ಮಡ್ಗಿದ್ದೊ.

ಕಂಚಿನ ತಟ್ಟೆಗ, ಎಲೆ ತಟ್ಟೆಗ, ಆರತಿ ತಟ್ಟೆಗ, ಬಾಳೆಲೆ, ಬಾಳೆ ಹಣ್ಣ್, ಚಾಪೆ, ಚೊಂಬು, ಮಣೆ, ಹರ್ಕೆ ಹಣ ಕಟ್ಟಿಕೆ ಬಿದಿರ್‌ನ ಗೊಟ್ಟ, ಹಿಂಗೆ ಎಲ್ಲಾ ಒಂದ್ ಕಡೆ ಜೋಡ್ಸಿ ಮಡ್ಗಿದ್ದೊ. ಒಂದ್ ಕೋಂಬರೆಲಿ ಎಲ್ಲಾ ಇಟ್ಟ್ ಬೀಗ ಹಾಕಿದೊ.

* * * * *

ಮನೆ ದೊಡ್ಡದಿತ್ತ್. ಹಂಗೆ ಎದುರಿಗೆ ಅಂಗಳ ದೊಡ್ಡದಿದ್ರಂದ ಮತ್ತೆ ಮನೆಲೇ ಶುಭ ಕಾರ್ಯ ಮಾಡಕುತೇಳಿ ಶಾಸ್ತ್ರ ಮನೆಲೇ ಮಾಡ್ದುತ ತೀರ್ಮಾನ ಮಾಡಿದ್ದೊ.

ಬೆಳಿಗ್ಗೆ ಒಂಭತ್ತು ಗಂಟೆಗೆ ಶಾಸ್ತ್ರ ಶುರು ಮಾಡ್ದುತ ನೆಂಟರಿಷ್ಟರ್ ಎಂಟು ಗಂಟೆಗೇ ಬಾಕೆ ಶುರು ಆತ್. ಅಡ್ಗೆಯವು ಬೆಳಿಗ್ಗೆ ತಿಂಡಿಗೆ, ಇಡ್ಲಿ ವಡೆ ಸಾಂಬಾರ್ ಮಾಡಿದ್ದೊ. ಬಂದವು ಎಲ್ಲಾ ತಿಂಡಿ ತಿಂದ್ ಶಾಸ್ತ್ರ ಮಾಡಿಕೆ ಹೊರ್‍ಟೊ.

ಸೋದರ ಮಾವ ಬಂದ್ ಕಾಸ್ ತಾಳಿ ಕಟ್ಟಿದ ಮ್ಯಾಲೆ ಮದ್ವೆ ಕಾರ್ಯ ಶುರು ಆತ್.

ಮಧ್ಯಾಹ್ನದ ಹೊತ್ತಿಗೆ ಸಮರ್ಥ್‌ನ ಫ್ರೆಂಡ್‌ಗಳ ಒಂದ್ ಹಿಂಡ್ ಬೆಂಗ್ಳೂರ್‌ಂದ ಟೆಂಪೊ ಮಾಡಿಕಂಡ್ ಬಂದ್ ತಲ್ಪಿದೊ. ಅವ್ರಲ್ಲಿ ಸುಮಾರ್ ಜನ ಕೊಡಗಿನವೇ ಆಗಿದ್ದೊ. ಸಾಯಂಕಾಲ ಚಪ್ಪರಕ್ಕೆ ಎಲ್ಲವೂ ಗೌಡ ಸಮಾಜಕ್ಕೆ ಹೊರ್‍ಟೊ.

ಚಪ್ಪರಲಿ ಕಳ್ಳ್, ಊಟ ಬಳಂಬಿಕೆ ಸಮರ್ಥ್‌ನ ಫ್ರೆಂಡ್‌ಗಳೇ ನಿತ್ತ್‌ಬುಟ್ಟಿದ್ದೊ. ಮನೆ ಮಕ್ಕಳಂಗೆ ಎಲ್ಲವು ಒಟ್ಟಿಗೆ ಮಾತಾಡಿಕಂಡ್ ಓಡಾಡಿಕಂಡ್ ಇದ್ರಂದ ಮಂದಪ್ಪ ಮತ್ತೆ ಶಾರದನವ್ಕೆ ಬಾಳಾ ಕುಶಿ ಆತ್.

ಸಮರ್ಥ್ ತನ್ನ ಫ್ರೆಂಡ್‌ಗಳ್ನ ನೋಡಿಕಂಬ ಕೆಲ್ಸನ ಸ್ವಾತಿಗೆ ವಹಿಸಿತ್ತ್.

ಎರ್ಡ್ ದಿನ ಗೌಜಿಲಿ ಮದ್ವೆ ಕಳ್ದ್ ಸಮರ್ಥ್–ಲಾವಣ್ಯ ಬಾಳಾ

ಜೋಡಿಗಳಾದೊ. ಲಾವಣ್ಯ ಸಹ ಬೆಂಗಳೂರ್‌ಲಿ ಇಂಜಿನಿಯರ್ ಆಗಿತ್ತ್.

ಮದ್ವೆನ ಗೌಜಿನೊಟ್ಟಿಗೆ ಸ್ವಾತಿನ ಎಂ.ಬಿ.ಬಿ.ಎಸ್. ರಿಸಲ್ಟ್ ಬಂದ್ ಅವ್ಳು ಡಿಸ್ಟಿಂಕ್ಷನ್‌ಲಿ ಪಾಸ್ ಆದ ಕುಶಿ ಸೇರಿ ಮನೆಲಿ ಎಲ್ಲವೂ ಸಂಭ್ರಮಲಿ ಇದ್ದೊ.

ಮದ್ವೆಗೆ ಸಮರ್ಥ್-ಲಾವಣ್ಯ ಒಂದು ತಿಂಗ ರಜೆ ಹಾಕಿದ್ದೊ. ತುಪ್ಪ ತಕಂಡ್ ಹೋದು, ಹತ್ತೊಳೆಯದು ಎಲ್ಲಾ ಶಾಸ್ತ್ರಗಳ್ನ ಮುಗ್ಸಿ ಇಬ್ಬರೂ ಬೆಂಗಳೂರಿಗೆ ಹೊರ್ಟು ಹೋದೊ. ಸಮರ್ಥ್ ಬೆಂಗಳೂರ್‌ಲಿ ಮನೆ ಮಾಡಿತ್ತ್. ಅವು ಹೋಕೆ ಮುಂದೆನೇ ಶಾರದ ಮತ್ತೆ ಮಂದಪ್ಪನವು ಹೋಗಿ ಎಲ್ಲಾ ಜೋಡ್ಸಿಕೊಟ್ಟ್ ಬಂದಿದ್ದೊ.

* * * * *

ಸ್ವಾತಿ ಪಕ್ಕದ ಊರ್‌ನ ಪ್ರಾಥಮಿಕ ಆರೋಗ್ಯ ಕೇಂದ್ರಲಿ ಡಾಕ್ಟ್ರಾಗಿ ಸೇರಿಕಣ್ತ್. ಎಂ.ಡಿ. ಮಾಡ್ದು ಅವ್ಳ ದೊಡ್ಡ ಕನ್ಸ್ ಆಗಿತ್ತ್. ಅದ್ಕೆ ಅವ್ಳು ರೆಡಿ ಆಗ್ತಾ ಇತ್ತ್. ಮನೆಂದ ಹೋಗ್ತಿದ್ರಂದ ಆರಾಮಾಗಿ ಆಸ್ಪತ್ರೆಗೆ ಹೋಗಿ ಬಾತಿತ್ತ್. ಇಷ್ಟ್ ವರ್ಷ ಮನೆಂದ ದೂರ ಹಾಸ್ಟೆಲ್‌ಲಿ ಇದ್ದ್‌ಕಂಡ್ ಓದಿದ್ರಂದ ಈಗ ಮನೆಲಿ ಇರ್ದು ನೆಮ್ಮದಿ ಆಗಿತ್ತ್. ಹಿಂಗೆ ಎರ್ಡ್ ವರ್ಷ ಕಳ್ದ್ ಹೋತ್. ಬರ್ದ ಪರಿಕ್ಷೆಲಿ ಅವ್ಳಿಗೆ ಸೀಟ್ ಸಿಕ್ಕಿತ್ತ್‌ಲೆ.

ಮಂದಪ್ಪನವು ಮಗಳಿಗೆ ಮದ್ವೆ ಮಾಡಿ ಬುಡ್‌ವ ಗ್ಯಾನಲಿ ಇದ್ದೊ. ಹಂಗೆ ತಿಳ್ದವರೊಟ್ಟಿಗೆ ವಳ್ಳ ಹೈದ ಇದ್ದರೆ ಹೇಳಿತ ಹೇಳಿದ್ದೊ. ಅವಳ್ನ ಡಾಕ್ಟರಿಗೇ ಕೊಡಿಕೆ ಅವ್ಕೆ ಇಷ್ಟ ಇತ್ತ್. ಹಂಗೆತ ಸರಿಯಾದವು ಸಿಕ್ಕಕೊಲಾ... ಹಿಂಗೆ ಸುಮಾರ್ ಸಮೆ ಕಳ್ದ್ ಹೋತ್. ಮಂದಪ್ಪನವು ಡಾಕ್ಟರ್ ಹೈದನೇ ಬೇಕುತೇಳ್ವ ವಿಷ್ಯನ ಬುಟ್ಟ್, ಬ್ಯಾರೆ ಲಾಯ್ಕ ಓದಿ ವಳ್ಳ ಕೆಲ್ಸಲಿರ್ವ ಒಳ್ಳೆ ಹೈದ ಆದುತ ಹೇಳ್ವಲ್ಲಿಗೆ ಬಂದಿದ್ದೊ.

ಆದರೆ, ಸ್ವಾತಿ ಎಂ.ಡಿ. ಮಾಡದೆ ಮದ್ವೆ ಆದುಲೆತ ಹೇಳಿಕಂಡಿತ್ತ್. ಹಿಂಗೆ ಇರ್ಕನ ದೂರದ ನೆಂಟರಾಗಿದ್ದ ಮೈಸೂರ್‌ನ ಕೈ ತುಂಬಾ ಸಂಬಳ ಇರ್ವ ಇಂಜಿನಿಯರ್ ಹೈದ ಸ್ವಾತಿನ ನೋಡಿಕೆ ಬಂದದೆತ ಮಂದಪ್ಪನವು ತಿಳ್ಸ್‌ಕನ ಸ್ವಾತಿಗೆ ಬಾಳಾ ಗಾಬರಿ ಆತ್.

ಅಪ್ಪ ಮಂದಪ್ಪನವು ಅವಳ್ನ ಎಷ್ಟ್ ಪ್ರೀತಿ ಮಾಡ್‌ತಿದ್ದವೋ ಕೆಲವು ವಿಚಾರಲಿ ಅಷ್ಟೇ ಕಟ್ಟ್ ನಿಟ್ಟಾಗಿದ್ದೊ.

ಸ್ವಾತಿನ ನೋಡಿಕೆ ಹೈದ ಬರ್ವ ದಿನ ಬಂದೇ ಬುಡ್ತ್. ಶಾರದನವು ಹೇಳ್ದಂಗೆ ಸ್ವಾತಿ ಸರಳವಾಗಿ ಅವ್ಳಿಗೆ ಒಪ್ಪುವ ಮೆರೂನ್ ಕಲರ್‌ನ ಮೈ ತುಂಬಾ ಚಿನ್ನದ ಬೊಟ್ಟು ಇದ್ದ ಸಣ್ಣ ಜರಿ ಬಂದ ಮೈಸೂರ್ ಸಿಲ್ಕ್ ಸೀರೆ ಉಟ್ಟ್ ಸಿದ್ಧಳಾತ್.

ಸಮರ್ಥ್ ಮತ್ತೆ ಲಾವಣ್ಯ ಹಿಂದೆನ ದಿನನೇ ಬಂದಿದ್ದೊ. ಸ್ವಾತಿ ಮನಸ್ಸಿಲ್ಲದ ಮನಸ್‌ಂದ ಹೊರ್ಟ್ ಕುದ್ದಿತ್ತ್. ಆದರೂ ಅವ್ಳ ಬಾಳಾ ಲಾಯ್ಕ ಕಾಂಬತಿತ್ತ್.

ಸಾಯಂಕಾಲ ನಾಕ್ ಗಂಟೆ ಹೊತ್ತಿಗೆ ಸರಿಯಾಗಿ ಹೈದನ ಮನೆಯವು ಬಂದೊ. ಹೈದ, ಹೈದನ ಅಪ್ಪ, ಅಮ್ಮ ಮತ್ತೆ ತಂಗೆ ಬಂದಿದ್ದೊ.

ಸ್ವಾತಿನ ನೋಡ್‌ತಿದ್ದಂಗೇ ಅವ್ಳ ಪೊರ್ಲುಗೆ ಅವೆಲ್ಲಾ ಮರುಳಾಗಿದ್ದೊತೇಳ್ದಕೆ ಅವರ ಮುಖನೇ ಸಾಕ್ಷಿಯಾಗಿತ್ತ್.

ಸ್ವಾತಿ ತಲೆ ಎತ್ತಿ ನೋಡ್ಕನ ನಗೆ ತುಂಬಿದ ತುಂಟ ಕಣ್ಣ್‌ಗಳ ಮೋಡಿಗೆ ಸಿಲುಕಿತ್. ಎಲ್ಲವೂ ಅವಳ್ನ ಆಗಲೇ ಸೊಸೆಯಾಗಿಬುಟ್ಟಂಗೆ ಬಾಳಾ ಪ್ರೀತಿಲಿ ಮಾತಾಡ್ಸಿದೊ. ಸ್ವಾತಿನ ಅಪ್ಪ ಅಮ್ಮಂದ್ರೂ ಸಹ ಆಗಲೇ ಹರ್ಷನ ತಮ್ಮ ಅಳಿಯನಾಗಿ ಒಪ್ಪಿಕೊಂಡಂಗೆ ಕಾಂಬತಿತ್ತ್. ಸಮರ್ಥ್ ಮತ್ತೆ ಲಾವಣ್ಯನ ಮುಖ ನೋಡ್ಕನ ಅವು ಸಹ ಒಪ್ಪಿಕೊಂಡಂಗೆ ಕಾಂಬತ್ತಿತ್ತ್.

ಕಡೆಲಿ ಎಂ. ಡಿ. ಮಾಡಕುತೇಳ್ವ ತನ್ನ ನಿರ್ಧಾರನ ಸಡ್ಲ ಮಾಡ್ವ ತೀರ್ಮಾನ ಸ್ವಾತಿಯದಾಗಿತ್ತ್.

ಹರ್ಷ ಎರ್ಡು ವರ್ಷಗಳ ಹಿಂದೆನೇ ಮಡಿಕೇರಿಯ ಮದ್ವೆ ಒಂದರ್ಲಿ ಸ್ವಾತಿನ ನೋಡಿ ಮೆಚ್ಚಿಕಂಡಿತ್ತ್.

ಹರ್ಷನ ಮನೆಯವು ಸಹ ಕೊಡಗಿನವೇ ಆಗಿದ್ದ್, ಅವ್ರ ಉದ್ಯೋಗಂದಾಗಿ ಮೈಸೂರ್‌ಲಿ ನೆಲ್ಸಿದ್ದೊ.

ಮುಂದೆ ಒಂದೇ ತಿಂಗಲಿ ಸ್ವಾತಿ–ಹರ್ಷನ ಎಂಗೇಜ್‌ಮೆಂಟ್ ನಡ್ದ್ ಹೋತ್. ಇನ್ನ್ ಮೂರ್ ತಿಂಗ ಕಳ್ದ್ ಮದ್ವೆತ ನಿಶ್ಚಯ ಮಾಡ್ದೊ.

ಮೂರು ತಿಂಗಳ್‌ಲಿ ಗೌಡ ಸಮಾಜಲಿ ಅವರಿಬ್ಬರ ಮದ್ವೆ ಬಾರಿ ಗೌಜಿಲಿ ನಡ್ತ್.

* * * * *

ದಿನಗ ಉರುಳುತ್ತಿದ್ದೊ. ಸ್ವಾತಿ ಹರ್ಷನೊಟ್ಟಿಗೆ ಹರ್ಷಲಿ ಎರಡು ವರ್ಷ ಕಳ್ದಿತ್ತ್. ಆದರೆ ಅತ್ತೆಗೆ ನೆಚ್ಚಿನ ಸೊಸೆ ಆಕೆ ಮಾತ್ರ ಅವ್ಳಿಗೆ ಸಾಧ್ಯ ಆಗಿತ್ತ್‌ಲೆ.

ಸ್ವಾತಿ ಮೈಸೂರ್‌ಲಿ ಇದ್ದ ಒಂದ್ ಖಾಸಗಿ ಆಸ್ಪತ್ರೆಲಿ ಕೆಲ್ಸ ಮಾಡ್ತಿತ್ತ್. ಅವ್ಳು ಹೊತ್ತು ಗೊತ್ತಿಲ್ಲದೆ ಆಸ್ಪತ್ರೆಂದ ಬಾದು ಅತ್ತೆಗೆ ಸಿಟ್ಟು ಬಾತಿತ್ತ್. ಅವ್ಳಿಗೆ ಮನೆಲಿ ಕೆಲ್ಸ ಮಾಡಿಕೆ ಸಮಯ ಸಿಕ್‌ತಿತ್ತ್‌ಲೆ. ಎಮರ್ಜೆನ್ಸಿ ಕೇಸ್ ಬಂದರೆ ರಾತ್ರಿ ಸಹ ಹೋಕಾಗಿತ್ತ್.

ಅಲ್ಲದೆ, ಮಂಜನು ಸೊಸೆನ ಚಂದಕೆ ಮರುಳಾಗಿ ಹಿಂದೆ ಸುತ್ತುದು ಅವ್ವಂಗೆ ಸ್ವಲ್ಪ ಅಸೂಯೆ ಹುಟ್ಟಿಸ್‌ತಿತ್ತ್.

ಆಗೊಮ್ಮೆ ಈಗೊಮ್ಮೆ ಸೊಸೆನ ಮಂಜನೊಟ್ಟಿಗೆ ದೂರುತಿದ್ದೊ. ಆದರೆ ಗಂಡನ ಪ್ರೀತಿನ ಮುಂದೆ ಅತ್ತೆನ ಉದಾಸೀನ ಅವ್ಳಿಗೆ ಲೆಕ್ಕಕ್ಕೆ ಇತ್ತ್‌ಲೆ. ಈ ಮಧ್ಯೆ ಮಾವ ತೀರಿಕಂಡಿದ್ದೊ. ನಾದಿನಿನ ಮದ್ವೆ ಆಗಿತ್ತ್. ಮನೆಲಿ ಇದ್ದವು ಮೂರು ಜನ. ಸ್ವಾತಿ ಮನೆಲಿ ಇದ್ದಷ್ಟ್ ಹೊತ್ತು ಮನೆ ಕೆಲ್ಸ ಹಂಗೆ ಅಡಿಗೆ ಕೆಲ್ಸ ಮಾಡ್‌ತಿತ್ತ್. ಪಾತ್ರೆ ತೊಳಿಯಕೆ ಬಟ್ಟೆ ಒಗಿಯಕೆ ಮನೆ ವರ್ಸಿಕೆ ಒಬ್ಬ ಹೆಂಗಸ್ ಬಾತಿತ್ತ್. ಆದರೂ ಅತ್ತೆಗೆ ಸಮಾಧಾನ ಇರ್ತಿತ್ತ್‌ಲೆ.

* * * * *

ಅಂದ್ ಹರ್ಷನ ಫ್ರೆಂಡ್‌ನ ಮದ್ವೆ. ಬೆಂಗ್ಳೂರ್‌ನ ಛತ್ರಲಿ ಮದ್ವೆ ಇತ್ತ್. ಸ್ವಾತಿ–ಹರ್ಷ ರಜ ಹಾಕಿ ಮದ್ವೆಗೆ ಹೊರ್ಟೊ. ಮದ್ವೆ ಮುಗ್ಸಿ ಹಂಗೆ ಸಮರ್ಥ್‌ನ ಮನೆಗೆ ಹೋಗಿ ವಾಪಾಸ್ ಬಾಕನ ಸಾಯಂಕಾಲ ಆಗಿತ್ತ್. ಮೈಸೂರಿಗೆ ತಲ್ಪಿಕೆ ಇನ್ನ್ ಇಪ್ಪತ್ತ್ ಕಿಲೋಮೀಟರ್ ಇತ್ತ್ ಅಷ್ಟೆ. ಸಣ್ಣದಾಗಿ ಮಳೆ ಬ್ಯಾರೆ ಬಾತಿತ್ತ್.

ತಿರುವೊಂದರ್ಲಿ ಕಾರಿಗೆ ಅಡ್ಡ ಬಂದ ಒಂದ್ ಹಸ್‌ನ ತಪ್ಪಿಸಿಕೆ ರಾಂಗ್ ಸೈಡಿಗೆ ಕಾರ್‌ನ ತಿರ್ಗಿಸಿತ್ ಹರ್ಷ. ಒಂದೇ ಕ್ಷಣಲಿ ಎದ್ರುಂದ ರಭಸಲಿ ಬಂದ ಲಾರಿ ಅಡಿಗೆ ಕಾರ್ ಸಿಕ್ಕಿತ್ತ್.

ಹತ್ರಲಿ ಇದ್ದ ಅಂಗಡಿಲಿದ್ದ ಜನ ಹಂಗೆ ಸುದ್ದಿ ತಿಳ್ದ ಊರ್ ಜನ ಎಲ್ಲಾ ಗುಡ್ಡೆ ಸೇರ್‍ದೊ. ಯಾರೋ ಆಂಬುಲೆನ್ಸ್‌ಗೆ ಪೊಲೀಸರ್ಗೆ ಫೋನ್ ಮಾಡ್ದೊ.

ಇಬ್ಬರ್‍ನೂ ಮೈಸೂರ್‌ನ ಆಸ್ಪತ್ರೆಗೆ ಸೇರ್ಸಿದ್ದೊ. ವಿಷಯ ತಿಳ್ದ್ ಹರ್ಷ ಮತ್ತೆ ಸ್ವಾತಿನ ಮನೆಯವು ಓಡಿ ಬಂದಿದ್ದೊ.

ಹರ್ಷನ ಕಾಲ್ ಫ್ರಾಕ್ಚರ್ ಆಗಿತ್ತ್. ಸೀಟ್ ಬೆಲ್ಟ್ ಹಾಕದೆ ಕುದ್ದಿದ್ದ ಸ್ವಾತಿನ ಮುಖ ಡ್ಯಾಶ್ ಬೋರ್ಡ್‌ಗೆ ಬಡ್ದಿದ್ರುಂದ ಅವಳ ಮುಖಕ್ಕೆ ಬಾಳಾ ಪೆಟ್ಟಾಗಿತ್ತ್. ಎದೆ ಮತ್ತೆ ಕೈಗೆ ಸಹ ಪೆಟ್ಟಾಗಿತ್ತ್. ಎರ್ಡ್ ದಿನ ಅವ್ಳಿಗೆ ಜ್ಞಾನನೇ ಇತ್ತ್‌ಲೆ.

ಹರ್ಷಂಗೆ ಸ್ವಾತಿನಷ್ಟ್ ಪೆಟ್ಟಾಗಿತ್ತ್‌ಲೆ.

ಮೂರನೆ ದಿನ ಜ್ಞಾನ ಬಂದ ಮ್ಯಾಲೆ ಇಬ್ಬರಿಗೂ ಪ್ರಾಣಾಪಾಯ ಇಲ್ಲೆತ ಡಾಕ್ಟರ್ ಹೇಳ್ದ ಮೇಲೆ ಮನೆಯವೆಲ್ಲಾ ಸಮಾಧಾನಂದ ಉಸಿರಾಡ್ದೊ.

ಒಂದ್ ವಾರಲಿ ಹರ್ಷ ಚೇತರಿಸಿಕಂಡತ್. ಆದರೆ ಸ್ವಾತಿ ಏಳಿಕೆ ಆಗದ ಸ್ಥಿತಿಲಿ ಇತ್ತ್.

ಹರ್ಷ ಮೆಲ್ಲೆ ಅಮ್ಮನೊಟ್ಟಿಗೆ ಸ್ವಾತಿ ಇದ್ದಲ್ಲಿಗೆ ವೀಲ್ ಚೇರ್‌ಲಿ ಬಂದಂವ ಸ್ವಾತಿನ ನೋಡ್‌ತ್ತಿದ್ದಂಗೆ ಚೀರಿ ಕುಸ್ದ್ ಕುದ್ದತ್. ಗಾಬರಿಲಿ ಅಮ್ಮ ನರ್ಸ್‌ನ ಕರ್ಕಂಡ್ ಬಂದೊ.

ಅಂವನ ಬ್ಯಾರೆ ನರ್ಸ್‌ಗಳ ಸಹಾಯಂದ ಅವನ ಹಾಸಿಗೆಗೆ ತಂದ್ ಮಲ್‌ಗಿಸ್‌ಕನ ಅಲ್ಲಿಗೆ ಆತುರಲಿ ಬಂದ ಡಾಕ್ಟರ್ ಅಂವನ ಪರೀಕ್ಷೆ ಮಾಡಿ ಇಂಜೆಕ್ಷನ್ ಕುತ್ತಿ, ಅಂವನ ಯಾಕೆ ಏಳಿಕೆ ಬುಟ್ಟದ್‌ತ ನರ್ಸ್‌ಗಳಿಗೆ ಬೈದ್ ಹೋದೊ.

ಸ್ವಾತಿನ ಮುಖ ತುಂಬಾ ಬ್ಯಾಂಡೇಜ್ ಹಾಕಿದ್ರಂದ ಅವಳ ಮುಖ ವಿಕಾರ ಆಗಿತ್ತ್. ಅದ್ನ ನಿರೀಕ್ಷೆ ಮಾಡದೆ ಇದ್ದ ಹರ್ಷಂಗೆ ಒಮ್ಮೆಗೇ ಶಾಕ್ ಆಗಿತ್ತ್. ಅಂವ ಆಕ್ಸಿಡೆಂಟ್ ಆದಮ್ಯಾಲೆ ಸ್ವಾತಿನ ಕಂಡಿತ್ತ್‌ಲೆ.

ಮತ್ತೆ ಒಂದ್ ವಾರಲಿ ಹರ್ಷನ ಆಸ್ಪತ್ರೆಂದ ಡಿಸ್‌ಚಾರ್ಜ್ ಮಾಡಿದ್ದೊ. ಅಂವ ಮನೆಲಿ ರೆಸ್ಟ್ ತಕಂಬತಿತ್ತ್. ಅಂವ ಓಡಾಡಿಕೆ ಎರ್ಡ್ ತಿಂಗ ಬೇಕೂತ ಡಾಕ್ಟರ್ ಹೇಳಿದ್ದೊ. ಅಂವ ವೀಲ್ ಚೇರ್‌ಲೇ ಓಡಾಡಿಕಂಡಿತ್ತ್.

ಮತ್ತೆ ಹದಿನೈದ್ ದಿನ ಕಳ್ದಂಗೆ ಸ್ವಾತಿನ ಮುಖದ ಬ್ಯಾಂಡೇಜ್ ತೆಗ್ದಿದ್ದೊ. ಸ್ವಾತಿನ ಮುಖ ವಿಕಾರ ಆಗಿತ್ತ್. ಲಾಯ್ಕ ವಾಸಿ ಆದ·ಮ್ಯಾಲೆ ಪ್ಲಾಸ್ಟಿಕ್ ಸರ್ಜರಿ ಮಾಡಿರೆ ಕಲೆಗ ಹೋದವೆತ ಡಾಕ್ಟರ್ ಭರವಸೆ ಕೊಟ್ಟಿದ್ದೊ.

ಹರ್ಷ ಬಹಳ ನಿರಾಶನಾಗಿತ್ತ್. ಅಂವ ಆಗೊಮ್ಮೆ ಈಗೊಮ್ಮೆ ಮೂರನೇ ಮನ್ಸರಂಗೆ ಬಂದ್ ಸ್ವಾತಿನ ನೋಡಿ ಹೋಗ್‌ತಿತ್ತ್. ಹರ್ಷನ ಅಮ್ಮ ಎರಡ್ ಸಲ ಬಂದ್ ಹೋಗಿದ್ದೊ.

ಸ್ವಾತಿನ ಪಾಲಿಗೆ ಮರ್ಡ್‌ದೊಂದೇ ಉಳ್ದಿತ್ತ್. ತನ್ನ ಸ್ಥಿತಿಗೆ ಕಾರಣವಾದ ದೇವರ ಮ್ಯಾಲೇ ಅವ್ಳಿಗೆ ಸಿಟ್ಟ್ ಬಂದಿತ್ತ್.

ಶಾರದನವು ಸ್ವಾತಿನ ಪಕ್ಕಂದ ಕದಲದೆ ಅವಳ್ನ ಸಮಾಧಾನ ಮಾಡ್ತಿದ್ದೊ. ಸ್ವಲ್ಪ ವಾಸಿಯಾದ ಮ್ಯಾಲೆ ಮಂದಪ್ಪ ಮತ್ತೆ ಶಾರದನವು ಅವಳ್ನ ತಮ್ಮೊಟ್ಟಿಗೆ

ಕರ್ಕಂಡ್ ಹೋದೊ. ಬಾಯಿ ಮಾತಿಗೂ ಹರ್ಷ ಮತ್ತೆ ಅಂವನ ಅಮ್ಮ ನಮ್ಮಲ್ಲಿ ಇರ್‍ಲಿತ ಹೇಳ್ತ್‌ಲೆ.

ಸ್ವಾತಿನ ಮುಖಲಿದ್ದ ಕಲೆಗ ಅವಳ ಅಂದನ ಹೀರಿದ್ದೊ. ಎಡ್ದ ಕಡೆ ದವಡೆ ಮತ್ತೆ ಹಣೆ ಮ್ಯಾಲೆ ದೊಡ್ಡ ಗಾಯದ ಕಲೆಗಳಿದ್ದೊ. ಬ್ಯಾರೆ ಕಲೆಗ ಅಷ್ಟಾಗಿ ಕಾಂಬತಿತ್ತ್‌ಲೆ.

ಸ್ವಾತಿ ಮನೆಗೆ ಬಂದ್ ಒಂದು ತಿಂಗ ಕಳ್ದರೂ ಹರ್ಷ ನೋಡಿಕೆ ಬಾತ್‌ಲೆ. ಮಧ್ಯೆ ಎರಡ್ ಸಲ ಫೋನ್ ಮಾಡಿ ಮಾತಾಡಿತ್ತ್ ಅಷ್ಟೆ. ಫೋನ್‌ಲಿ ತನ್ನ ಕಷ್ಟಗಳ್ನೇ ಹೇಳಿಕಂಡಿತ್ತ್. ಸ್ವಾತಿನ ಪೊರ್ಲುನ ನೋಡಿ ಮದ್ವೆ ಆಗಿದ್ದ ಅವಂಗೆ ಅವ್ಳ ರೂಪ ಕಮ್ಮಿ ಆದ ಮ್ಯಾಲೆ ಅವ್ಳ ಮ್ಯಾಲೆ ಯಾವುದೇ ಪ್ರೀತಿ ಉಳ್ದಿತ್ತ್‌ಲೆ. ಇದ್‌ಕೆ ಅಂವನ ಅಮ್ಮನ ಕುಮ್ಮಕ್ಕೂ ಇತ್ತ್. ಅಷ್ಕೆ ಮುಂದೆಂದನೂ ಸ್ವಾತಿತೇಳ್ರೆ ಅಷ್ಟಕಷ್ಟೆ. ಈಗ ಮಂಜನ ತಲೆ ಕೆಡ್ಸಿದ್ದೊ.

ಅಂದ್ ಸ್ನಾನ ಮಾಡಿ, ಊಟ ಮಾಡಿ ಸ್ವಾತಿ ಕೋಂಬರೆಲಿ ಮಲ್ಗಿತ್ತ್. ಅದೇ ಸಮಯಲಿ ಹರ್ಷ ಬಂದಿತ್ತ್. ಅವ್ಳು ಮಲ್ಗಿರುವ ವಿಷ್ಯ ತಿಳ್ದ್ ಅಂವ ಅಲ್ಲೆ ಕುದ್ದತ್. ಮುಂದೆನಂಗೆ ಆದರೆ ಅವ್ಳು ಮಲ್ಗಿದಲ್ಲಿಗೇ ಹೋಗಿ ಗೋಳು ಹೊಯ್ಕಂಬತಿತ್ತ್.

ಇದ್ನ ಗಮನಿಸಿದ ಶಾರದನವ್ರ ಮನ್ಸ್‌ಲಿ ಸಂಶಯ ಹುಟ್ಟಿತ್. ಅಷ್ಟೊತ್ತಿಗೆ ಎದ್ದ್ ಬಂದ ಸ್ವಾತಿ, ಹರ್ಷ ಬಂದಿರ್‌ದುನ ತಿಳ್ದ್, ಅವಸರಲಿ ಮುಖ ತೊಳ್ದ್ ಬಾತ್. ಮೇಕಪ್ ಮಾಡಿಕೆ ಸಮಯ ಇತ್ತ್‌ಲೆ.

ಅವಳ್ನ ಕಂಡ್ ಹರ್ಷ ಒಂದ್ ಕ್ಷಣ ಬೆಚ್ಚಿ ಬೀತ್. ಮತ್ತೆ ತಾನೇ ಸಮಾಧಾನ ಮಾಡಿಕಂಡ್ ಮೆಲ್ಲೆ ನಗೆ ತಂದ್ ಕಂಡ್– "ಹ್ಯಾಗೋಳಾ"ತ ವಿಚಾರ್ಸಿತ್.

ಶುರುಲಿ ಸ್ವಾತಿನ ರೂಪನ ಮೆಚ್ಚಿದ್ದವಂಗೆ ರೂಪ ಕಳ್ಕಂಡ ಸ್ವಾತಿಲಿ ಒಲವು ಮೂಡ್ತ್‌ಲೆ.

ಸ್ವಾತಿ ಅಂವ ತನ್ನೊಟ್ಟಿಗೆ ಒಂತರ ಅಳಕ್‌ಲಿ ಮಾತಾಡ್‌ದನ್ನ ಗಮನಿಸಿತ್. ಅವ್ಳಿಗೆ ಅಂವನ ನಗೆ ಕೃತಕವಾಗಿ ಕಂಡತ್. ಬೇರೆಯವರ್ನ ಕೇಳ್ದಂಗೆ 'ಹ್ಯಾಗೊಳಾ'ತೇಳಿ ಕೇಳ್ದ ಅವನ ಮ್ಯಾಲೆ ಸಿಟ್ಟ್ ಬಾತ್.

'ಗಂಡಸರೇ ಹಿಂಗೆ ಬರೀ ಹೊರಗೆನ ರೂಪ ಅವ್ಕೆ ಮುಖ್ಯ. ಹೆಂಗಸರಂಗೆ ಹೃದಯ ಪೀಟಲಿ ಅವು ಎಂದೂ ಸ್ಥಾನ ನೀಡ್‌ದುಲೆ. ರೂಪ ಇಲ್ಲದ ಮ್ಯಾಲೆ ಹೆಣ್ಣ್‌ನ ಹೊರಗೆ ಕರ್ಕಂಡ್ ಹೋಕೆ, ತನ್ನ ಹೆಣ್ಣ್‌ತೇಳ್ಕೆನೂ ಅವ್ಕೆ ಮುಜುಗರ!

ಆದರೆ ಹೆಣ್ಣ್, ಗಂಡ ಜೀವಲಿ ಇದ್ದರೆ ಸಾಕ್‌ತೇಳುವಷ್ಟ್ ತ್ಯಾಗಿ' ಮನ್ಸ್‌ಲೇ ಅಂದ್‌ಕಂಡತ್. ಇದ್ದಕ್ಕಿದ್ದಂಗೆ ಹರ್ಷ, "ಸ್ವಾತಿ ನೀನ್ ಎಂ.ಡಿ. ಮಾಡಕುತೇಳ್ತಿದ್ದಲ್ಲಾ ಎಂತಾತ್"ತ ಕೇಳ್ತ್.

"ಎಕ್ಸಾಂ ಬರ್ದ್ದೊಳೆ ಈ ಸಲ ಪಾಸಾಗುವ ಹೋಪ್ಸ್ ಉಟ್ಟುತ" ಹೇಳ್ತ್.

ಮರುಕ್ಷಣ ಸ್ವಾತಿ ಬೆಚ್ಚಿ ಬೀತ್. ಅಂವ ತನ್ನ ಕರ್ಕಂಡ್ ಹೋಕೆ ಬಂದಿರ್ದುತ ಅವ್ಳು ಗ್ಯಾನ ಮಾಡಿತ್ತ್. ಆದರೆ ಅಂವ ಮನೆಗೆ ಬಾದು ಬ್ಯಾಡತ ಪರೋಕ್ಷವಾಗಿ ಸೂಚಿಸಿದಂಗೆ ಆತ್.

"ಯಾಕೆ ಸುತ್ತಿ ಬಳ್ಸಿ ಮಾತಾಡ್ರೆ, ನಿನ್ನ ರೂಪ ಹೋದ ಮ್ಯಾಲೇ ನಂಗೆ ನಿನ್ನ ಅವಶ್ಯಕತೆ ಇಲ್ಲೆ, ಇನ್ನ್ ನನ್ನ ಹತ್ರ ಬರ್ಬಡತ ನೆಟ್ಟಗೆ ಹೇಳಿ ಬಿಡಿ" ತೇಳ್ತ್ ತನ್ನ ದುಃಖನ ನುಂಗಿಕಂಡ್.

"ಹಂಗೆಲ್ಲಿ ನಾನ್ ಹೇಳ್ದೆ. ನೀನ್ ಮುಂದೆಂದನೂ ಹೇಳ್ತಿದ್ದಲ್ಲಾ ಎಂ.ಡಿ. ಮಾಡಕುತ ಅದ್ಕೆ ಹೇಳ್ದೆ ಅಷ್ಟೆ."

ಸ್ವಾತಿಗೆ ದುಃಖಲೂ ನಗೆ ಬಾತ್. ಎಂತಾ ಸ್ವಾರ್ಥಿ ಅನ್ಸಿತ್.

"ನಾನೇನ್ ಜವಾಬ್ದಾರಿ ಅರಿಯದವಳಲ್ಲ. ಆದರೆ ಅಪಾತ್ರರಿಂದ ನಂಗೆ ಉಪದೇಶ ಬ್ಯಾಡ"ತೇಳಿ ತನ್ನ ಕೋಣೆಗೆ ಹೋಗಿಬುಡ್ತ್.

ಸ್ವಲ್ಪ ಹೊತ್ತಿಗೆ ಹರ್ಷ ಹೊರ್ಟು ಹೋದ್ದ್ ಗೊತ್ತಾತ್. ಮತ್ತೆಂದೂ ಅಂವ ಇತ್ತ ಸುಳ್ತ್‌ಲೆ. ಒಂದೆರಡ್ ಸಲ ಅಂವ ಫೋನ್ ಮಾಡ್ರೆ ಇವ್ಳೇ ರಿಸೀವ್ ಮಾಡ್ತ್‌ಲೆ.

ವಿಷ್ಯ ತಿಳ್ದ ಸ್ವಾತಿನ ಅಪ್ಪ-ಅಮ್ಮಂಗೆ ದಿಕ್ಕೇ ತೋಚದಂಗೆ ಆಗಿತ್ತ್. ಮಗಳ ಬಾಳ್ ಇಷ್ಟ್ ಬ್ಯಾಗ ಹಿಂಗೆ ಆದುತ ಅವು ಗ್ಯಾನ ಮಾಡಿತ್ತ್‌ಲೆ. ಅವ್ಕೆ ಏನು ಮಾಡ್ದುತೇ ಗೊತ್ತಾತ್‌ಲೆ.

ಮಂದಪ್ಪನವು ಎರಡೂ ಕಡೆ ಸಂಧಾನ ನಡ್ಸಿಕೆ ಪ್ರಯತ್ನ ಮಾಡಿ ವಿಫಲರಾಗಿದ್ದೊ. ಮದ್ವೆ ಈಗಲೇ ಬ್ಯಾಡತೇಳ್ದರೂ ಕೇಳದೆ ದುಡ್ಕಿದರ ಫಲ ಇದ್‌ತ ಅವು ಅಂದ್‌ಕಂಡೊ.

ಸ್ವಾತಿ ತನ್ನ ಆ ಮನೆಗೆ ಕಳ್ಸಿರೆ ಆತ್ಮಹತ್ಯೆ ಮಾಡಿಕಣತ ಹೆದರ್ಸಿತ್ತ್. ಅವಾಗಿಯೇ ಬಂದ್ ಕರೆಯಕೆ ಮುಟ್ಟ ಹೋದುಲೆತ ಹೇಳಿಬುಡ್ತ್.

ಸ್ವಾತಿನ ಅದೃಷ್ಟಕ್ಕೆ ಅವ್ಳು ಎಂ.ಡಿ. ಪರೀಕ್ಷೆಲಿ ಪಾಸಾಗಿತ್ತ್. ಮುಂಬೈನ ಕಾಲೇಜ್‌ಲಿ ಅವ್ಳಿಗೆ ಸೀಟ್ ಸಿಕ್ಕಿತ್ತ್.

ಎಂಟು ವರ್ಷ ಕಳ್ದ್ ಹೋಗಿತ್ತ್. ಈಗ ಸ್ವಾತಿ ಸುಪ್ರಸಿದ್ಧ ಗೈನೋಕಲಾಜಿಸ್ಟ್. ಪ್ಲಾಸ್ಟಿಕ್ ಸರ್ಜರಿ ಮಾಡಿಸಿಕಂಡಿದ್ದ ಅವ್ಳ ಮುಖ ಈಗ ಪೊರ್ಲುರ್ ಆಗಿತ್ತ್. ಅದ್ಕೆ ಮುಂದೆನ ಅಂದ ಬರದಿದ್ದರೂ ಕಲೆಗಳೆಲ್ಲಾ ಮಾಯವಾಗಿದ್ದೊ.

ಅವ್ಳ ಓದು ಮುಗ್ದ ಕೂಡಲೇ ಅವ್ಳಿಗೆ ರ್‍ಯಾಂಕ್ ಬಂದಿದ್ರಂದ ಮಂಗಳೂರ್‌ನ ಸರಕಾರಿ ಆಸ್ಪತ್ರೆಲಿ ಕೆಲ್ಸ ಸಿಕ್ಕಿತ್ತ್.

ಶಾರದನವು ಮಗಳೊಟ್ಟಿಗೆ ಇದ್ದೊ. ಈ ಮಧ್ಯೆ ಮಂದಪ್ಪನವು ತೀರಿಕಂಡಿದ್ದೊ. ಹರ್ಷನ ಯಾವ ಸಮಾಚಾರವೂ ತಿಳ್ದಿತ್‌ಲೆ. ಆದರೆ ಸ್ವಾತಿ ಪ್ರತಿದಿನ ಅವನ ನೆನೆಯದೆ ಇರ್ತಿತ್‌ಲೆ. ಅಂವ ದೂರ ಮಾಡಿದ್ದರೂ ಇವಳು ಅವನ ಮರಿಯಕೆ ಸಾಧ್ಯ ಆಗಿತ್ತ್‌ಲೆ.

ಈ ನಡುಲಿ ಅಂವ ಮತ್ತೆ ಮದ್ವೆಯಾಗುಟ್ಟುತ ಯಾರೋ ಹೇಳಿದ್ದೊ. ಸ್ವಾತಿ ಮೂಕಳಾಗಿ ಕಣ್ಣೀರ್ ಹಾಕಿತ್ತ್. ಆದರೂ ಅಂವ ಮತ್ತೆ ಬಂದೇ ಬಂದದೆತೇಳ್ವ ನಂಬಿಕೆ ಅವಳಲ್ಲಿ. ಆದರೆ ಮರುಕ್ಷಣ ತನ್ನ ಹುಚ್ಚುತನಕ್ಕೆ ತಾನೇ ನಗಾಡ್‌ತಿತ್ತ್.

ಅವಳ್ನ ಮದ್ವೆಯಾಕೆ ಎಷ್ಟೋ ಡಾಕ್ಟರ್‌ಗ ಇಷ್ಟಪಟ್ಟಿದ್ದೊ. ಆದರೆ ಅವ್ಳು ಮಾತ್ರ ತನ್ನ ಗಂಡ ಫಾರಿನ್‌ಲಿ ಉಟ್ಟುತ ಹೇಳಿ ಎಲ್ಲರ ಬಾಯಿ ಮುಚ್ಚಿಸಿತ್ತ್. ಶಾರದನವು ಸಹ ಮತ್ತೆ ಅವಳ್ನ ಮದ್ವೆಯಾಗ್‌ತ ಹೇಳ್ತಿದ್ದೊ. ಹರ್ಷ ಕಟ್ಟಿದ್ದ ತಾಳಿ ಅವ್ಳ ಕುತ್ತಿಗೆಲಿ ಹಂಗೇ ಇತ್ತ್.

ಹರ್ಷ ಮದ್ವೆ ಆದ ಸುದ್ದಿ ಕೇಳಿ ಸುಮಾರ್ ಜನ ಅವ್ಳಿಗೆ ಕೇಸ್ ಹಾಕಿಕೆ ಹೇಳಿದ್ದೊ. ಆದರೆ ಸ್ವಾತಿನೇ ಖಡಾಖಂಡಿತನಾಗಿ ಬೇಡತ ಹೇಳಿತ್ತ್. ಅವ್ಳಿಗೆ ಅವನ ಮ್ಯಾಲೆ ಇದ್ದ ಪೂಜ್ಯ ಭಾವನೆ ಇದ್‌ಕೆ ಕಾರಣ ಆಗಿತ್ತ್. ಅದ್‌ಕೆ ಅವಳ ಕೆಲವು ಫ್ರೆಂಡ್ಸೆಲ್ಲಾ "ನೀನ್ ಡಾಕ್ಟರಾಗಿರ್ದು ದಂಡಕ್ಕೆ"ತೇಳ್ತಿದ್ದೊ. ಸ್ವಾತಿನ ನಗೆಯೇ ಅದ್‌ಕ್ಕೆ ಉತ್ತರ ಆಗಿತ್ತ್. ಹರ್ಷನೊಟ್ಟಿಗೆ ಕಳೆದ ಎರಡು ಮಧುರ ವರ್ಷಗಳೇ ಅವ್ಳ ಜೀವಮಾನಕ್ಕೆ ಸಾಕ್‌ತೇಳ್ವ ಭಾವನೆ ಅವಳಲ್ಲಿತ್ತ್.

* * * * *

ಸ್ವಾತಿಗೆ ಮಂಡ್ಯಕ್ಕೆ ವರ್ಗ ಆಗಿ ಹದಿನೈದು ದಿನ ಆಗಿತ್ತ್. ಅವ್ಳ ಒಳ್ಳೆ ಕೆಲ್ಸನ ಮೆಚ್ಚಿ ಅವ್ಳಿಗೆ ಪ್ರಮೋಷನ್ ಕೊಟ್ಟು ವರ್ಗ ಮಾಡಿದ್ದೊ.

ಅಂದ್ ತುಂಬಾ ಸುಸ್ತಾಗಿ ಬಂದ್ ಮಲ್ಗಿತ್ತ್. ಎಮರ್ಜೆನ್ಸಿ ಆಪರೇಷನ್ ಇದ್ರಂದ ಅವ್ಳು ಮನೆಗೆ ಬಾಕನೇ ಗಂಟೆ ಎಂಟಾಗಿತ್ತ್. ಮಲ್ಗಿದ ತಕ್ಷಣ ಅವ್ಳಿಗೆ

ನಿದ್ದೆ ಬಂದಿತ್ತ್.

ಮೊಬೈಲ್ ರಿಂಗ್ ಆಕನ ತಟ್ಟನೆ ಅವ್ಳಿಗೆ ಎಚ್ಚರ ಆತ್.

"ಹಲೋ...."

"ಹಲೋ ಡಾಕ್ಟರ್, ಅಶ್ವಿತಾ ಹಿಯರ್ ಒಂದು ಎಮರ್ಜೆನ್ಸಿ ಕೇಸ್ ಬಂದುಟ್ಟು, ಕಂಡೀಷನ್ ಸೀರಿಯಸ್"ತೇಳ್ತ್ ಡ್ಯೂಟಿ ಡಾಕ್ಟರ್ ಅಶ್ವಿತಾ.

"ಈಗ ಬಂದೆ"ತೇಳಿ ಫೋನ್ ಕಟ್ ಮಾಡ್ತ್ ಸ್ವಾತಿ. ವಾಚ್ ನೋಡ್ತ್.

ರಾತ್ರಿ ಎರಡ್ ಗಂಟೆ. ಎದ್ದ್ ಬೇಗ ಹೊರ್ಟ್ ಅಮ್ಮಂಗೆ ಹೇಳಿ ಕಾರ್ ತಕಂಡ್ ಹೊರ್ಟತ್. ಡ್ರೈವರ್ ಮನೆಗೆ ಹೋಗಿತ್ತ್. ಅಷ್ಟ್ ಹೊತ್ತಿಗೆ ಅವನ ಯಾಕೆ ಕರಿಯದುತೇಳಿ ತಾನೇ ಡ್ರೈವ್ ಮಾಡಿಕಂಡ್ ಹೊರ್ಟತ್. ಮನೆಂದ ಆಸ್ಪತ್ರೆಗೆ ಸ್ವಲ್ಪ ದೂರ ಮಾತ್ರ ಇತ್ತ್.

ಸ್ವಾತಿನ ಕಂಡ ನರ್ಸ್ "ದೊಡ್ಡ ಡಾಕ್ಟ್ರು ಬಂದ್ರು"ತೇಳಿ ಓಡಿ ಬಾತ್. ಅಷ್ಟೊತ್ತಿಗೆ ಅಲ್ಲಿಗೆ ಬಂದ ಅಶ್ವಿತಾ, "ಡೆಲಿವರಿ ಕೇಸು, ಕೂಸ್ ದೊಡ್ಡದಾಗಿ ಬೆಳ್ದು ಬಿಟ್ಟುಟ್ಟು. ಮದರ್ ತುಂಬಾ ವೀಕ್ ಉಟ್ಟು. ಮೂರ್ ದಿನಂದ ಪೆಯಿನ್ ಇದ್ದರೂ ಈಗ ಜಸ್ಟ್ ಕರ್ಕಂಡ್ ಬಂದೊಳೊ. ಓಟಿಲಿ ಎಲ್ಲಾ ರೆಡಿ ಮಾಡ್ನೊಳೆ"ತೇಳ್ತ್ ಒಂದೇ ಉಸುರಿಗೆ.

ಸ್ವಾತಿ ಏನೂ ಮಾತಾಡದೆ ಸೀದಾ ಓಟಿಗೆ ಹೋಗಿ ಪೇಷೆಂಟ್‌ನ ಕೇಸ್ ಶೀಟ್ ಚೆಕ್ ಮಾಡ್ತ್.

"ಬ್ಲಡ್ ಬ್ಯಾಂಕ್‌ಲಿ ಬ್ಲಡ್ ರೆಡಿ ಉಟ್ಟಾ."

"ಇವ್ರ ಗ್ರೂಪ್‌ದ್ ಒಂದ್ ಬಾಟಲ್ ಮಾತ್ರ ಇತ್ತ್. ಅದ್ಕೆ ಇವ್ರ ಗಂಡ ಬೇರೆ ಕಡೆಂದ ಬ್ಲಡ್ ತನ್ನೆತ ಹೋಗುಟ್ಟು."

ಸಿಸೇರಿಯನ್ ಮಾಡಿ ಕೂಸ್‌ನ ಹೊರಗೆ ತೆಗಿಯಕನ ಗಂಟೆ ಮೂರಾಗಿತ್ತ್. ಕೂಸ್ ಬಾಳಾ ಮುದ್ದಾಗಿ ಗುಂಡು ಗುಂಡಾಗಿತ್ತ್. ಅವ್ವನ ಸ್ಥಿತಿ ಮಾತ್ರಾ ಗಂಭೀರ ಆಗಿತ್ತ್. ವಿಪರೀತ ರಕ್ತ ಸ್ರಾವ ಆಗಿದ್ರಂದ ಅವ್ವ ಬಾಳಾ ನಿತ್ರಾಣ ಆಗಿತ್ತ್. ಆಪರೇಶನ್ ಆದಂಗೆ ರಕ್ತ ಕೊಡಿಕೆ ಶುರು ಮಾಡ್ದೊ.

ಸ್ವಾತಿ ತನ್ನ ಶಕ್ತಿ ಮೀರಿ ಪ್ರಯತ್ನ ಪಟ್ಟತ್. ಪಲ್ಸ್ ಸ್ವಲ್ಪ ಸುಧಾರ್ಸ್‌ಕನ ತಾನ್ ಇಲ್ಲೇ ಇರ್ದಾಗಿ ಹೇಳಿ ತನ್ನ ಕನ್ಸಲ್ಟಿಂಗ್ ರೂಂಗೆ ಬಾತ್. ಹಂಗೇ ಚೇರ್‌ಲಿ ಕುದ್ದ್ ಕಣ್ಣ್ ಮುಚ್ಚಿತ್.

ಅವ್ಳ ಮೈಮನಗ ದಣ್ದ್ ಹೋಗಿದ್ದೊ. ಹಿಂದೆನ ರಾತ್ರಿ ಸಹ ಒಂದ್

ಎಮರ್ಜೆನ್ಸಿ ಕೇಸ್ ಇದ್ರಂದ ಎರ್ಡ್ ದಿನಂದ ನಿದ್ದೆ ಸರಿಯಾಗಿತ್ತ್‌ಲೆ.

ಹಂಗೆ ನಿದ್ದೆ ಹತ್ತಿದಂಗೆ ಆಕನ, "ಡಾಕ್ಟರ್ ಬೇಗ ಬನ್ನಿ"ತೇಳಿ ನರ್ಸ್ ಓಡಿಬಾಕನ ದಡಬಡತಾ ಎದ್ದ್ ಓಡ್ತ್.

ಪೇಷಂಟ್ ಸ್ಥಿತಿ ತೀರಾ ಕೆಟ್ಟ್ ಹೋಗಿತ್ತ್. ಅವ್ಳ ಶರೀರ ತಣ್ಣಗಾಕೆ ಶುರು ಆಗಿತ್ತ್. ಉಸಿರಾಟ ಮಂದವಾಗಿತ್ತ್. ಮೈಯೆಲ್ಲಾ ರಕ್ತ ಸೋರಿ ಹೋದಂಗೆ ಬಿಳ್ಚಿ ಹೋಗಿತ್ತ್. ಯಾವ ಇಂಜೆಕ್ಷನೂ ಪ್ರಯೋಜನಕ್ಕೆ ಬಾತ್‌ಲೆ. ಆಕ್ಸಿಜನ್ ಕೊಡಿಕೆ ಶುರು ಮಾಡ್ದೊ.

ಅಶ್ವಿತಾ ಹೇಳ್ದ್ ಗ್ಯಾನ ಬಾತ್. ಪೇಷಂಟ್‌ನ ಅವ್ವನ ಮನೆ ಪಕ್ಕದ ಹಳ್ಳಿಲಿ ಇತ್ತ್. ಶುರುನ ಬಾಣಂತನ ಆದ್ರಂದ ಹಳ್ಳಿಗೆ ಮಗಳ್ನ ಕರ್ಕಂಡ್ ಹೋಗಿದ್ದೊ.

ಮೂರ್ ದಿನಂದ ಹಳ್ಳಿಲಿದ್ದ ಸಣ್ಣ ಆಸ್ಪತ್ರೆಗೆ ಸೆರ್ಸಿದ್ದೊ. ಕಡೇಲಿ ಅಲ್ಲಿ ಆದುಲೆತ ಹೇಳ್ದ ಮ್ಯಾಲೆ ಗಂಡಂಗೆ ತಿಳ್ಸಿದ್ದೊ. ಗಂಡ ಬಂದ್ ಇಲ್ಲಿ ಸೇರ್ಸಿತ್ತ್. ಛೆ.... ಎಂತಾ ಕೆಲ್ಸ ಆತ್. ಇವು ಆಗಲೇ ಬಂದಿದ್ದರೆ ಎಷ್ಟ್ ಲಾಯ್ಕ ಇತ್ತ್‌ತ ಗ್ಯಾನ ಮಾಡ್ತ್ ಮನ್ಸ್.

ಸಾವು-ಬದುಕುಗಳ ನಡುಲಿ ಹೋರಾಡಿ ಹೆಸರಾಂತ ಗೈನೋಕಲಾಜಿಸ್ಟ್ ಸ್ವಾತಿನ ಕೈ ಮೀರಿ ಆ ಎಳೆ ವಯಸ್‌ನ ಅವ್ವ ಇಹದ ಬಂಧನನ ಹರ್ಕಂಡಿತ್ತ್.

ಸ್ವಾತಿಗೆ ಬಾಳಾ ಬ್ಯಾಜರ ಆಗಿತ್ತ್. ಅವ್ಳ ಸರ್ವಿಸ್‌ಲಿ ಬೇಕಾದಷ್ಟ್ ಸಾವು-ನೋವುಗಳ್ನ ಕಂಡಿತ್ತ್. ಆದರೆ ಇಂದ್ಯಾಕೊ ಅವ್ಳ ಕಣ್ಣ್ ಮುಂದೆ ಆ ಎಳೆ ವಯಸ್‌ನ ಹೆಣ್ಣ್‌ನ ಮುಖನೇ ಬಾತಿತ್ತ್.

ಎಳೆ ಕೂಸ್‌ನ ಸರಿಯಾಗಿ ನೋಡಿಕಣಿತೇಳಿ ಡ್ಯೂಟಿ ಡಾಕ್ಟರಿಗೆ ಒಪ್ಪಿಸಿ ಸ್ವಾತಿ ಮನೆಗೆ ಬಾತ್.

ಅವ್ಳಿಗೆ ನಿದ್ದೆ ಮಾಡಿಕೆ ಆತ್‌ಲೆ. ಕಣ್ಣುಮುಚ್ಚಿರೆ ಆ ಅವ್ವನ ಮುಖನೇ ಕಾಂಬತ್ತಿತ್ತ್. ಹುಟ್ಟ್‌ಕನೇ ಅವ್ವನ ಕಳ್ಕಂಡ ತಬ್ಬಲಿ ಕೂಸ್‌ನ ನೆನ್ಸಿ ಮನಸ್ ಮರುಗಿತ್. ತನ್ನ ಬಾಳು ಸರಿಯಾಗಿದ್ದರೆ ತಾನೂ ಅಂತಹ ಮುದ್ದ್ ಕೂಸ್‌ನ ಅವ್ವ ಆಗಿರ್ತಿದ್ದೆ. ತಟ್ಟನೆ ಹರ್ಷನ ನೆನಪಾತ್. ಅಂವ ಹೆಣ್ಣ್ ಮಕ್ಕಳೊಟ್ಟಿಗೆ ಸುಖವಾಗಿರ್ದುತ ಗ್ಯಾನ ಆತ್.

ಅವ್ಳಿಗೆ ಪೇಷಂಟ್ ಕಡೆಯವು ಯಾರೂ ಇಲ್ಲದೆ ಇರ್ದು ನೆನಪಾತ್. "ಪೇಷಂಟ್ ಕಡೆಯವರ್ಯಾರು ಇಲ್ಲೆನಾ"ತ ಕೇಳ್ದಕ್ಕೆ ಪೇಷಂಟ್ ಗಂಡ ಬ್ಲಡ್ ತಾಕೆ ಹೋಗುಟ್ಟು, ಅವಳ ಅತ್ತೆ ಪೇಷಂಟ್ ಮಲ್ಗಿದಲ್ಲೇ ಉಟ್ಟಂತೆ. ಅವ್ಳ ತವರ್‌ಲಿ ಅವ್ಳ ಅವ್ವ

ಮಾತ್ರ ಇರ್ದಂತೆ ಅವು ಸಹ ಉಸಾರಿಲ್ಲದೆ ಮಲ್ಗಿವಳಂತೆ' ತೇಳಿ ನರ್ಸ್ ಹೇಳಿತ್ತ್.

ಪಾಪ ಬ್ಲಡ್ ತಾಕೆ ಹೋದ ಗಂಡ ಬಾಕೆ ಮುಂದೆನೇ ಅವ್ಳ ಮದುವೆ ಬಂಧನನ ಹರ್ದ್ ಕಂಡಿತ್ತ್.

ಸ್ವಾತಿಗೆ ತಡವಾಗಿ ಬಂದ ನಿದ್ರೆಂದ ಎಚ್ಚರ ಆಕನ ಮಧ್ಯಾಹ್ನ ಆಗಿತ್ತ್ ಎದ್ದ್ ಮುಖ ತೊಳ್ದು ಬಂದ್ "ಅಮ್ಮ ಯಾಕೆ ಏಳ್ಸಿತ್‌ಲೆ ಇಷ್ಟು ಹೊತ್ತು ಮಲ್ಗಿ ಬುಟ್ಟೆಲ್ಲಾ"

"ನೀನ್ ಸರಿಯಾಗಿ ನಿದ್ದೆ ಮಾಡದೆ ಎಷ್ಟ್ ದಿನ ಆತ್. ಅದ್ಕೇ ಏಳಿಸ್ತಿಲ್ಲೆ"

"ಯಾಕೆ ಒಂತರಾ ವಳಲ್ಲಾ ಎಂತಾತ್" ಪ್ಲೇಟಿಗೆ ಅನ್ನ ಹಾಕ್‌ತ ಕೇಳ್ದೊ ಶಾರದ.

"ಏನಿಲ್ಲಮ್ಮಾ. ರಾತ್ರಿ ಹೋಗಿದ್ದೆಯಲ್ಲ ಎಮರ್ಜೆನ್ಸಿ ಕೇಸ್ ಆ ಪೇಷಂಟ್ ತೀರಿಕಣ್ತ್"ತೇಳಿ ಎಲ್ಲಾ ವಿಷ್ಯ ಹೇಳ್ತ್ ಅಮ್ಮಂಗೆ.

ಊಟ ಮುಗ್ಸಿ ಆಸ್ಪತ್ರೆಗೆ ಫೋನ್ ಮಾಡ್ತ್ ಸ್ವಾತಿ. ಡ್ಯೂಟಿ ಡಾಕ್ಟರ್ ಮಾಲಿನಿ ಆದ್ರಂದ ಅವಳ ಮ್ಯಾಲೆ ನಂಬಿಕೆ ಇತ್ತ್.

"ನೀವು ರೆಸ್ಟ್ ತಗಣಿ ಡಾಕ್ಟರ್ ನಾನ್ ಮ್ಯಾನೇಜ್ ಮಾಡ್ನೆ ಎಮರ್ಜೆನ್ಸಿ ಕೇಸ್ ಏನಾರ ಬಂದರೆ ಫೋನ್ ಮಾಡ್ನೆತ" ಹೇಳ್ತ್ ಮಾಲಿನಿ.

"ಅಂದ ಹಂಗೆ ನಿನ್ನೆದ್ ಕೇಸ್ ಏನಾತ್ ಮಾಲಿನಿ"

"ಪೇಷೆಂಟ್ ಗಂಡ ಬೆಳಿಗ್ಗೆ ಬ್ಲಡ್ ತಕಂಡ್ ಬಾತ್. ವಿಷ್ಯ ತಿಳ್ಸಿ ಅವಂಗೆ ಟ್ರೀಟಿಮೆಂಟ್ ಕೊಡಿಕಾತ್. ಡೆಡ್ ಬಾಡಿ ತಕಂಡ್ ಹೋದೊ. ಕೂಸುಗೆ ಸ್ವಲ್ಪ ಟೆಂಪರೇಚರ್ ಇದ್ದದ್ರಂದ ಇಲ್ಲೇ ಇಟ್ಟುಕಂಡೊಳೊ."

"ರಿಯಲಿ ಪಿಟಿ. ನಾನ್ ಸಾಯಂಕಾಲ ಬನ್ನೆ"ತ ಫೋನ್ ಕಟ್ ಮಾಡ್ತ್. ಕೂಸು ಆಸ್ಪತ್ರೆಲೇ ಉಳ್ದಿತ್ತ್. ಸ್ವಾತಿಗೆ ಕೂಸ್‌ನ ಮೇಲೆ ಎಂತದೋ ಪ್ರೀತಿ. ಅದರ ಅಪ್ಪ ಒಂದ್ ವಾರ ಆದರೂ ಬಾರದಿರ್ಕನ ಆಸ್ಪತ್ರೆಲಿ ಗುಸು ಗುಸು ಶುರು ಆತ್.

ಮೇಲೆಂದ ಅಧಿಕಾರಿಗ ಈ ವಿಷ್ಯದ ಬಗ್ಗೆ ಫೋನ್ ಮಾಡಿದ್ದೊ. ಒಂದ್ ದಿನ ಸ್ವಾತಿ ಕೂಸುನ ತನ್ನ ಮನೆಗೆ ಕರ್ಕೊಂಡೋಗಿ ಅಮ್ಮನ ಕೈಗೆ ಒಪ್ಪಿಸಿತ್. ಅವ್ವನ ಪ್ರೀತಿಂದ ವಂಚಿತ ಆಗಿ ಆರೈಕೆ ಇಲ್ಲದೆ ಇದ್ದ ಕೂಸ್‌ನ ಅದರ ಅಪ್ಪ ಬಂದ್ ಕರ್ಕಂಡ್ ಹೋಕೆ ಮುಟ್ಟ ನೋಡಿಕತ ಅಮ್ಮಂಗೆ ಹೇಳ್ತ್. ಆ ಕೂಸ್‌ನ ಕಂಡ್ ಅವ್ಳಲ್ಲಿ ಸುಪ್ತ ಆಗಿದ್ದ ಮಾತೃವಾತ್ಸಲ್ಯ ಜಾಗೃತ ಆತ್.

ಮತ್ತೆರಡ್ ದಿನಲಿ ಕೂಸ್‌ನ ಅಪ್ಪ ಬಂದುಟ್ಟುತ ಡಾ. ಅಶ್ವಿತಾ ಹೇಳ್ತ್. ಕೂಸ್‌ನ ನೋಡಿಕಂಬಕೆ ಯಾರೂ ಇಲ್ಲದ್ರಂದ ಒಂದ್ ವಾರಲಿ ವ್ಯವಸ್ಥೆ ಮಾಡಿ ಕರ್ಕಂಡ್ ಹೋನೆತ ತಿಳ್ಸಿತ್‌ತ ಅಶ್ವಿತಾ ಹೇಳ್ತ್.

ಇದೊಳ್ಳೆ ಗಿರಾಕಿ ಆತಲ್ಲಾತ ಸ್ವಾತಿಗೆ ಕಿರಿಕಿರಿ ಆತ್.

* * * * *

"ನಮಸ್ಕಾರ ಡಾಕ್ಟರ್"

ತಲೆತಗ್ಗಿಸಿ ಹಣೆ ಮೇಲೆ ಕೈ ಇಟ್ಟ್‌ಕಂಡ್ ಬರ್ಕಂಡ್ ಕುದ್ದಿದ್ದ ಸ್ವಾತಿ ತಲೆ ಎತ್ತಿ ನೋಡ್ತ್.

ಮುಖದ ತುಂಬಾ ಬೆಳ್ದ ಹದಿನೈದ್ ದಿನದ್‌ತ ಹೇಳ್‌ವಂತ ಕಳೆ, ಕೆದರಿದ ತಲೆ, ಮಾಸಿದ ಬಟ್ಟೆ, ಕಂದಿದ ಮುಖ. ಆದರೆ ಆ ಕಣ್ಣ್‌ಗಳ್ನ ಎಲ್ಲೊ ನೋಡಿವಳೆತ ಅನ್ಸ್‌ತಿತ್ತ್.

ಹರ್ಷ.. ಹೌದು ಅದೇ ತುಂಟ ಕಣ್ಣ್‌ಗ ಅಂದ್ ನಗಾಡ್‌ತಿದ್ದೊ. ಇಂದ್... ಸ್ವಾತಿನ ಮೈ ಮೆಲ್ಲೆ ನಡುಗಿತ್.

ಆ ವ್ಯಕ್ತಿನ ಕಣ್ಣ್‌ಗ ಒಮ್ಮೆ ಅರಳಿ ಮತ್ತೆ ಹಂಗೇ ಮುದುಡಿದೊ.

"ಸ್ವಾತಿ.. ನೀನು...."

"ಸ್ವಾತಿ ಅಲ್ಲ ಡಾಕ್ಟರ್ ಸ್ವಾತಿ"

"ಹೌದು ನಾನೆಂದೊ ಆ ಸ್ವಾತಂತ್ರ್ಯ ಕಳ್ಕಂಡೆ ನಿಜ"ತೇಳ್ತ್ ಮುಖ ಬಾಡ್ಸಿ.

"ಕುದ್ದ್‌ಕಣಿ"ತೇಳ್ತ್ ಸೌಜನ್ಯಕ್ಕೆ

ಮತ್ತೆ "ಏನಾಕಾಗಿತ್ತ್.."ತ ಕೇಳ್ತ್. ಎಷ್ಟ್ ಒರಟಾಗಿ ಕೇಳಕುತ ಗ್ಯಾನ ಮಾಡಿತ್ತೊ ಅಷ್ಟೇ ಮೆಲ್ಲೆ ಹೊರ್ಟತ್ ಸ್ವರ.

"ಕೂಸ್‌ನ ಕರ್ಕಂಡ್ ಹೋಕೆ ಬಂದೆ"

"ವಾಟ್! ಆ ಕೂಸು ನಿಮ್ಮದಾ"

"ಹೌದು ಸ್ವಾತಿ, ನನ್ನದೊಂದು ದೊಡ್ಡ ಕತೆ"ತ ಹೇಳಿಕೆ ಶುರುಮಾಡ್ತ್.

"ನಾನ್ ನಿಂಗೆ ತುಂಬಾ ಅನ್ಯಾಯ ಮಾಡ್ದೆ. ನಾನ್ ಮಾಡ್ದ ತಪ್ಪಿಗೆ ಬೇಕಾದಷ್ಟ್ ಶಿಕ್ಷೆ ಅನುಭವ್ಸಿವಳೆ. ನಿನ್ನಿಂದ ದೂರಾಗಿ ನೆಮ್ಮದಿ ಅರ್ಸಿದವಂಗೆ ಅದ್ ಮರೀಚಿಕೆ ಆತ್. ಅಮ್ಮನ ಬಲವಂತಕ್ಕೆ ಮತ್ತೆ ಮದ್ವೆಯಾದೆ. ಎಂಟು ವರ್ಷ ಕಳ್ದರೂ ಮಕ್ಕ ಆತ್‌ಲೆತ ಕೊರ್ಗುತಿತ್ತ್. ಕಡೆಲಿ ಹಿಂಗಾತ್ ನೋಡ್.

ರಮ್ಯನ ಮಣ್ಣ್ ಮಾಡಿ ಮತ್ತೆ ಒಂದೇ ವಾರಲಿ ಅಮ್ಮನ ಮಣ್ಣ್ ಮಾಡಿ ಬಂದೆ. ಅದ್ಕೆ ಇಷ್ಟ್ ದಿನ ಕೂಸ್‌ನ ಹತ್ರ ಬಾತ್‌ಲೆ. ಇದ್ದೊಬ್ಬ ತಂಗೆನ ನಾಲ್ಕು ವರ್ಷಕೆ ಮುಂದೆ ಆಕ್ಸಿಡೆಂಟ್‌ಲಿ ಕಳ್ಕಂಡೆ.

ನಾನೀಗ ಒಂಟಿ. ನೀನ್ ನಿನ್ನ ಹಟ ಸಾದ್ಸಿ ನೂರಾರ್ ಜನ್ರಿಗೆ ಜೀವ ಕೊಡ್ವ ದೇವತೆ ಆದೆ. ಅಂದ್ ನಿನ್ನ ಹೊರಗಿನ ರೂಪನ ಮಾತ್ರ ನೋಡಿ ನಿನ್ನ ಬುಟ್ಟ್ ನಾನ್ ನನ್ನ ಸರ್ವಸ್ವನ ಕಳ್ಕಂಡೆ."

ಹರ್ಷ ಹೇಳಿಕಂಡ್ ಹೋದಂಗೆ ಸ್ವಾತಿ ಮೂಕಳಾಗಿ ಕೇಳ್ತ್. ಅವ್ಳ ಕಣ್ಣ್‌ಂದ ನೀರ್ ತಾನಾಗಿ ಇಳಿಯತಿತ್ತ್.

ಎಷ್ಟೋ ಹೊತ್ತ್ ಹಂಗೇ ಕುದ್ದಿತ್ತ್.

"ನಾನ್ ದುಡ್ಡೇನಾರ ಕಟ್ಟಿಕೆ ಬಾಕಿ ಉಟ್ಟಾ"

"ಅಂದರೆ ನಾನ್ ಮಾಡ್ದೆಲ್ಲಾ ದುಡ್ಡಿಗಾಗಿತ ಗ್ಯಾನ ಮಾಡ್ದರಾ? ರಮ್ಯ ಉಳ್ದಿದ್ದರೆ ಬ್ಯಾರೆ ಮಾತ್. ಈಗ ದುಡ್ಡುನೂ ಕಳ್ಕಂಡೆತ ಹೇಳಿಕಾದಲ್ಲಾ"

"ಸ್ವಾತಿ ಪ್ಲೀಸ್, ಹಂಗೆ ಹೇಳ್‌ಬ್ಯಾಡ, ರಮ್ಯ ನಿನ್ನ ತೋರ್ಸಿ ತಾನ್ ಕಣ್ಮರೆ ಆತ್. ಇಲ್ಲರೆ ಅವ್ಳು ಹಟಂದ ಇಲ್ಲಿಗೆ ಬಾತಿತ್‌ಲೆತ ಕಂಡದೆ. ಅವ್ಳಿಗೆ ಬದ್ಕಿಕೆ ಬಾಳಾ ಆಸೆ ಇತ್ತ್. ಆದರೆ..." ಅವಂಗೆ ಮುಂದೆ ಮಾತಾಡಿಕೆ ಆತ್‌ಲೆ. ಅವನ ದೊಂಡೆ ಕಟ್ಟಿದಂಗೆ ಆತ್.

ಸ್ವಲ್ಪ ಹೊತ್ತು ಕಳ್ದ ಮ್ಯಾಲೆ.

"ನಾನ್ ಕೂಸ್‌ನ ಕರ್ಕಂಡ್ ಹೋಗ್ಲಾ"ತ ಕೇಳ್ತ್.

"ಸ್ಸಾರಿ, ಕೂಸ್ ನನ್ನ ಮನೆಲಿ ಉಟ್ಟ್. ನಾಳೆ ಬನ್ನಿ"ತೇಳ್ತ್ ನಿರ್ಮಿಕಾರಲಿ. ಆದರೆ ಮನ್ಸೊಳಗೆ ಸಂಕಟ ಆತ್. ಇಷ್ಟ್ ದಿನ ಆ ಕೂಸ್‌ನೊಟ್ಟಿಗೆ ಕಳ್ದ ಸಮಯ ನೆನ್ಪ್ ಮನ್ಸ್ ಹಗುರ ಆತ್.

"ಬನ್ನೆ.."ತೇಳಿ ನಿಧಾನಲಿ ಕಾಲ್ ಎಳ್ಕಂಡ್ ಹೊರ್ಟ ಅವನ "ಹೋಗ್‌ಬಡಿ"ತೇಳಿ ಕಿರ್ಚಕುತ ಅನ್ಸಿತ್. ಆದರೆ ಸುಮ್ಮನೆ ಕುದ್ದತ್.

ಮಾರನೇ ದಿನ ಹರ್ಷ ಬಂದದೆತ ತಿಳ್ದಿದ್ದ ಸ್ವಾತಿ ಅವ್ಳಿಗೆ ಗೊತ್ತಿಲ್ಲದಂಗೆ ಸ್ವಲ್ಪ ಜಾಸ್ತಿ ಸಿಂಗಾರ ಮಾಡಿಕಣ್ತ್. ಆಸ್ಪತ್ರೆಗೆ ಬಾಕನ ಕೂಸ್‌ನ ಸಹ ಕರ್ಕಂಡ್ ಬಂದಿತ್ತ್.

ಹರ್ಷ ಬಾಕನ ಹಣ್ಣ್‌ನ ಪ್ಯಾಕೆಟ್ ಹಿಡ್ಕಂಡ್ ಬಂದಿತ್ತ್. ಸ್ವಾತಿಗೆ ನಗೆ ಬಾತ್. ಅವ್ಳು ನಗಾಡ್ತ್. ಹರ್ಷ ಗಾಬರಿಲಿ ನೋಡ್ತಿತ್ತ್.

"ಅಲ್ಲ ಕೂಸ್ ಹಣ್ಣ್ ತಿಂದದೆತ ತಿಳ್ಕಂಡಿದ್ರಾ" ನಗಾಡಿಕೆ ಶುರು ಮಾಡ್ತ್

"ಸಾರಿ ನಂಗೆ ಏನು ತರಕುತ ಗೊತ್ತಾತ್‌ಲೆ"ತೇಳ್ತ್. ಪೆಚ್ಚು ಪೆಚ್ಚಾಗಿ ಸ್ವಲ್ಪ ಹೊತ್ತು ಕುದ್ದ್‌ಕಂಡ್ ಕೂಸ್‌ನೇ ನೋಡ್ತಿತ್ತ್ ಹರ್ಷ. ಅವನ ಕಣ್ಣ್‌ಲಿ ನೀರಿಳಿಯತಿತ್ತ್. "ರಮ್ಯ ನನ್ಯಾಕೆ ಬುಟ್ಟು ಹೋದ, ಈ ಕೂಸ್‌ನ ನಾ ಹೆಂಗೆ ಸಾಕಲಿ"ತೇಳಿಕಣ್ತ್ ಮನ್ಸ್‌ಲಿ.

ಸ್ವಾತಿಗೆ ಅವನ ಪರಿಸ್ಥಿತಿ ಅರ್ಥ ಆಗಿ "ಈಗ ಬನ್ನೆತ" ಎದ್ದ್ ಒಳಗೆ ಹೋತ್. ಅವ್ಳಿಗೆ ಬಾಳಾ ಬ್ಯಾಜಾರ್ ಆತ್.

ಕಾಲುಗಂಟೆ ಬುಟ್ಟು ಬಂದರೂ ಅಂವ ಇನ್ನೂ ಹಂಗೇ ಕುದ್ದಿತ್ತ್. ಯಾವ ರೀತಿಲಿ ಕೃತಜ್ಞತೆ ತಿಳ್ಸಕೊ ಗೊತ್ತಾಗ್‌ತಿಲ್ಲೆ"ತೇಳ್ತ್

"ಕೂಸ್‌ನ ಎಲ್ಲಿ ಬಿಟ್ರೆ, ನೋಡಿಕಂಬಕೆ ಯಾರಾರ್ ವಳೊನಾ"?

"ಇಲ್ಲೆ ಅನಾಥಾಶ್ರಮಲಿ ಎಲ್ಲಾ ಹೇಳಿ ರೆಡಿಮಾಡಿ ಬಂದೊಳೆ"ತೇಳಿ ತಲೆ ತಗ್ಸಿತ್.

"ವಾಟ್! ಈ ಲೋಕ ತಿಳಿಯದ ಕೂಸ್‌ನ ಅನಾಥಾಶ್ರಮಕ್ಕೆ ಸೇರ್ಸಿರಾ? ಅಂದ್ ನನ್ನ ಕೈ ಬುಟ್ಟ್ ಆತ್. ಇಂದ್ ಈ ಕೂಸ್‌ನ ಅಪ್ಪ ಇದ್ದೂ ತಬ್ಬಲಿ ಮಾಡ್ತಾವರ್‌ನಾ"

"ಇನ್ನೆಂತ ಮಾಡಲಿ ಹೇಳ್. ನಾನೇ ಯಾರೂ ಇಲ್ಲದ ತಬ್ಬಲಿ ಆಗೊಳೆ. ನಂಗೆ ಕೂಸ್‌ನ ಹೆಂಗೆ ಸಾಕುದೇ ಗೊತ್ತ್‌ಲೆ. ನನ್ನ ಒಟ್ಟಿಗೆ ಈ ಕಂದ ಏನ್ ಸುಖ ಪಡ್ದು, ಅಪ್ಪ ಇದ್ದರೆ ಅಮ್ಮ ಇದ್ದಂಗೆ ಆದೆನಾ"

"ಯಾಕೆ ನಾ ಇಲೆನಾ" ಅವಳ ತುಟಿ ಮೀರಿ ಬಂದಿತ್ತ್ ಮಾತ್. ತಕ್ಷಣ ತುಟಿ ಕಚ್ಚಿಕಣ್ತ್.

"ಸ್ವಾತಿ ನೀನ್ ನಿಜವಾಗಿ ದೇವತೆನೇ"

"ನೀವು ಹೇಳಿಕೆ ಮುಂದೆನೇ ಕೂಸು ನನ್ನ ಮನೆ ಸೇರಿಟ್ಟು"

"ನನಗಿಂತ ನನ್ನ ಕೂಸೇ ಅದೃಷ್ಟಶಾಲಿ"

ಸ್ವಾತಿ ಮಾತಾಡ್‌ತ್‌ಲೆ. ಅಲ್ಲಿ ಮೌನ ತುಂಬಿತ್ತ್.

"ಹಂಗಾರೆ ನಾನ್ ಹೊರ್ಟನೆ. ಮತ್ತೆ ಭಾನುವಾರ ಬನ್ನೆ"ತೇಳಿ ಕುಶಿಲಿ ಹೊರ್ಟತ್.

'ಎಲ್ಲಿಗೆ'ತ ಕೇಳಿಕೆ ಮನಸ್ಸಾತ್. ಆದರೆ ಸ್ವಾಭಿಮಾನ ಅಡ್ಡ ಬಾತ್. ಮೌನಲಿ ತಲೆ ಆಡ್ಸಿತ್.

ಮೆಟ್ಲ್ ಇಳ್ದ್ ಹೊರ್ಟ ಹರ್ಷನ ನೋಡಿ ಕರುಳು ಹಿಂಡಿದಂಗೆ ಆತ್. 'ಹೆಂಗಿದ್ದವ ಹೆಂಗಾವ್ನ' ತೇಳಿಕಣ್ತ್. ಮರೆಯಾಕೆ ಮುಟ್ಟ ನೋಡ್‌ತ್ತಿದ್ದ್ ಒಳಗೆ

ಬಾತ್. ತನ್ನತನನೇ ಕಳ್ಕಂಡಂಗೆ ಅನ್ಸಿತ್. ಆ ಕ್ಷಣಲಿ ಅವ್ಳಿಗೆ ತಾನ್ ಡಾಕ್ಟರ್, ಹರ್ಷ ತನ್ನ ಬುಟ್ಟಂವತೇಳ್ದಿಲ್ಲಾ ಮರ್ತ್ ಹೋತ್.

ಡಾಕ್ಟರ್ ಮಾಲಿನಿಗೆ ಹೇಳಿ ಸೀದಾ ಮನೆಗೆ ಬಾತ್. ಕೂಸ್‌ನ ಆಗಲೇ ಆಯಾನ ಕೈಲಿ ಮನೆಗೆ ಕಳ್ಸಿತ್ತ್.

* * * * *

ಐತ್‌ವಾರ ಬಂದೇ ಬುಡ್ತ್. ಡ್ಯೂಟಿ ಇಲ್ಲದಿದ್ದರೂ ಡ್ಯೂಟಿ ನೆಪಮಾಡಿಕಂಡ್ ಸ್ವಾತಿ ಆಸ್ಪತ್ರೆಗೆ ಬಂದಿತ್ತ್.

ಹಂಗೇ ಎತ್ತಲೋ ನೋಡಿಕಂಡ್ ತನ್ನ ಹಿಂದೆನ ಜೀವನನ ನೆನ್ಸಿಕಂಡ್ ಕುದ್ದಿತ್ತ್.

"ಡಾಕ್ಟರ್ ಸ್ವಾತಿಯವರೇ..." ಆತ್ಮೀಯ ಕರೆ ಕೇಳ್ಸಿತ್.

ತಿರ್ಗಿದ ಸ್ವಾತಿ ಒಂದ್ ಗಳಿಗೆ ಆಶ್ಚರ್ಯಲಿ ಕಣ್ಣ್ ಅರಳಿಸಿತ್.

ನೀಟಾಗಿ ಡ್ರೆಸ್ ಮಾಡಿ ಶೇವ್ ಮಾಡಿ ಬಂದಿತ್ತ್ ಹರ್ಷ. ಸ್ವಾತಿಗೆ ಹಿಂದೆ ಹರ್ಷ ನೆನ್ಪಿಗೆ ಬಾತ್.

"ಪ್ಲೀಸ್ ಸ್ವಾತಿತ ಕರೆಯನಿ ಸಾಕ್"

ಆಶ್ಚರ್ಯಂದ ಅವಳ್ನೇ ನೋಡ್ತ್ ಹರ್ಷ.

"ಇದು ಕೂಸ್‌ಗೆ ಅಲ್ಲ, ಕೂಸ್‌ನ ಅಮ್ಮಂಗೆ"ತೇಳಿ ತನ್ನ ಕೈಲಿದ್ದ ಹೂ ಮತ್ತೆ ಹಣ್ಣ್‌ಗಳ್‌ನ ಕೊಟ್ಟತ್.

"ಥ್ಯಾಂಕ್ಸ್"ತ ಮಾತ್ರ ಹೇಳ್ತ್ ಸ್ವಾತಿ.

ಸ್ವಲ್ಪ ಹೊತ್ತು ಮಾತಾಡ್‌ದ ಮೇಲೆ ಹರ್ಷ "ಕೂಸ್‌ನ ನೋಡಕಾ"ತ ಕೇಳ್ತ್.

"ನಿಮ್ಮ ಕೂಸ್‌ನ ನೋಡಿಕೆ ಸಂಕೋಚ ಯಾಕೆ? ಆದರೆ ಕೂಸ್ ಮನೆಲಿ ಉಟ್ಟ್, ಇಂದ್ ನಾನ್ ಕರ್ಕಂಡ್ ಬಾತ್‌ಲೆ"

"ಹೌದಾ..." ಅವನ ಮುಖ ಬಾಡಿ ಹೋತ್.

"ಪರ್ವಾಗಿಲ್ಲೆ ಮನೆಗೆ ಬನ್ನಿ. ನಾನ್ ಅಮ್ಮಂಗೆ ಎಲ್ಲಾ ಹೇಳಿವಳೆ."

ಹರ್ಷನ ಮನ್‌ಸ್‌ಲಿ ಅಳ್‌ಕಿತ್ತ್. ಸ್ವಾತಿನ ಅಮ್ಮಂಗೆ ಹೆಂಗೆ ಮುಖ ತೋರ್ಸುದುತ. ಅವರ್ನ ಎದ್ರುಸೋ ಶಕ್ತಿ ಅವಂಗೆ ಇತ್ತ್‌ಲೆ.

ಶಾರದ ಜೊತೆ ಜೊತೆಯಾಗಿ ಕಾರ್‌ಂದ ಇಳ್ದ ಇಬ್ಬರ್‌ನ ನೋಡಿ ಸೆರಗ್‌ಲಿ

ಕಣ್ಣೊರ್ಸಿಕೊಂಡೊ. ಹಿಂದೆನಂಗೇ ಹರ್ಷನ ಮಾತಾಡ್ಸಿದೊ. ಮುಖಲಿ ಯಾವುದೇ ಭಾವನೆಗಳ್ನ ತೋರ್ಸಿಕಣ್ತ್‌ಲೆ.

ಅಷ್ಟೊತ್ತಿಗೆ ಕೂಸು ಮರ್ಬ ಸದ್ದ್ ಕೇಳಿ ರೂಂಗೆ ಹೋತ್ ಸ್ವಾತಿ. ಶಾರದನವು ಕಾಫೀ ಮಾಡಿಕೆ ಒಳಗೆ ಹೋದೊ. ಸ್ವಲ್ಪ ಹೊತ್ತು ಕುದ್ದಿದ್ದ ಹರ್ಷ ಮೆಲ್ಲೆ ರೂಮಿಗೆ ಹೋತು.

"ನಿಮ್ಮ ಹಂಗೇ ಉಟ್ಟು ತುಂಟ"ತೇಳಿ ಮುದ್ದು ಮಾಡಿ ಕೂಸ್‌ನ ಹರ್ಷನ ಕೈಗೆ ಕೊಟ್ಟತ್.

ಕೈಕೈ ಸೋಕುಕನ ಕಣ್ಣ್‌ಗ ಒಂದಾದೊ.

ಕೂಸ್‌ನ ಎತ್ತಿಕಣಿಕೆ ಬಾರದೆ ಅವಸ್ಥೆ ಪಡ್ತಿದ್ದ ಹರ್ಷನ ಕಂಡ್

"ಹಂಗೆ ಕೂಸ್‌ನ ಎತ್ತಿ ಕಂಬದಾ ಕೊಡಿ ಇಲ್ಲಿ" ತೇಳ್ತ್ ಸ್ವಾತಿ.

ಕೂಸ್‌ನ ಅವ್ಳ ಕೈಗೆ ಕೊಟ್ಟ ಹರ್ಷ" ನನ್ನ ಕೂಸ್‌ಗೆ ಸ್ಥಾನ ಕೊಟ್ಟ ಹೃದಯಲಿ ಈ ತಬ್ಬಲಿಗೊಂದು ಸ್ಥಾನ ಸಿಕ್ಕುದಾ"ತ ಕೇಳ್ತ್ ಬಾಡಿದ ಮುಖಲಿ. ಅವನ ಸ್ವರ ಪಾತಾಳಂದ ಬಂದಂಗಿತ್ತ್.

ಸ್ವಾತಿ ಮೌನಲಿ ತಲೆ ತಗ್ಗಿಸಿ ಕುದ್ದತ್. ಅವ್ಳ ಮನ್ಸೊಳಗೆ ಯುದ್ಧನೇ ನಡಿಯತಿತ್ತ್.

ಹರ್ಷ ಎದ್ದು ಬಂದ್ ಅವ್ಳ ಹತ್ರ ಕುದ್ದ್ ಅವ್ಳ ಕೈ ಹಿಡ್ದ್,

"ನೀನ್ ನನ್ನ ಕೈ ಬುಟ್ರೆ, ನನ್ನ ನೀನೇ ಹುಚ್ಚಾಸ್ಪತ್ರೆಗೆ ಸೇರ್ಸಿಕಾದೆ"

ಸ್ವಾತಿ ತಲೆ ಎತ್ತಿ ಅವನನ್ನೆ ದಿಟ್ಟಿಸಿತ್.

ಅವಳ ಕೈಗ ಅಂದ್ ಹರ್ಷ ಕಟ್ಟಿದ್ದ ತಾಳಿಯೊಟ್ಟಿಗೆ ಆಡ್‌ತ್ತಿದ್ದೊ.

ಕಣ್ಣ್‌ಂದ ಎರ್ಡ್ ಹನಿ ನೀರ್ ಉದುರ್ತ್.

ಹರ್ಷ ಅವಳ್ನ ತನ್ನ ಎದೆಗೆ ವರ್ಗಿಸಿಕಂಡ್ ಅವ್ಳ ಕಣ್ಣೀರ್‌ನ ವರ್ಸಿತ್.

ಅವರಿಬ್ಬರ "ಅಪೂರ್ವ ಸಂಗಮ"ಕ್ಕೆ ಸಾಕ್ಷಿಯಾಗಿ ಕೈ ಕಾಲ್ ಬಡ್ಕಂಡ್ ಮಲ್ಗಿತ್ತ್ ಪುಟ್ಟ ಕೂಸು. ಕಾಫಿ ತಿಂಡಿ ತಕಂಡ್ ಬಂದ ಶಾರದನವು ಕುಶಿಲಿ ಮೂಕರಾದೊ. ದೇವ್ರೆ ಇನ್ನ್ ಮುಂದಾದರೂ ಇವು ಹಿಂಗೇ ಇರ್ಲಿತ ದೇವರ್ನ ಬೇಡಿಕಂಡೊ.

* * * * *

## ಮಿಂಚಿದ ಕಾಲ

**ಆಟಿ ತಿಂಗ**ದ ಮಳೆಗಾಲ. ಮಳೆ-ಗಾಳಿನ ಆರ್ಭಟ ನಡ್ದಿತ್. ಎತ್ತ ನೋಡಿರೂ ಬರೀ ನೀರೇ ನೀರ್. ಪೇಪರ್ ತೆರ್ದರೆ, ಟಿ.ವಿ ಹಾಕಿರೆ ಬರೀ ಬರೆ ಕುಸಿತ, ರಸ್ತೆ ಬಿರುಕು, ಮರ ಬಿದ್ದ್ ಮನೆಗೆ ನಷ್ಟ, ತೋಟ-ಗದ್ದೆಗ ಕೊಚ್ಚಿ ಹೋದ, ಲೈಟ್ ಕಂಬ ಬಿದ್ದ ಸುದ್ದಿ. ಕರೆಂಟ್ ಇಲ್ಲದೆ ಕತ್ತಲೆಲಿ ಮುಳ್ಗಿದ್ದ ಜನ, ಮೊಬೈಲ್ ಚಾರ್ಜ್ ಇಲ್ಲದೆ ಯಾವುದೇ ಸಮಾಚಾರ ಇಲ್ಲದೆ ಮೌನಕ್ಕೆ ಜಾರಿದ್ದ ಜನ. ಇಂತಹ ಮಳೆ-ಗಾಳಿನ ದಿನ ಸಾಯಂಕಾಲ ಆಗಿತ್.

"ಸಾವಿತ್ರಮ್ಮ ಒಳಗೆ ಬನ್ನಿ. ಈ ಗಾಳಿ ಮಳೆಗೆ ಕಿಟಕಿ ಹತ್ರ ಎಷ್ಟ್ ಹೊತ್ತ್ ನಿತ್ತರೆ, ನಿಮಿಗೆ ಉಸಾರಿಲ್ಲೆ ಬ್ಯಾರೆ. ನಿಮ್ಮ ಮಂಜ ನಾಳೆ ಬಾದು, ಬನ್ನಿ ವಳಗೆ" ವೃದ್ಧಾಶ್ರಮದ ವಾರ್ಡನ್ ಕರ್ತ್.

ನಿಟ್ಟುಸುರ್ ಬುಟ್ಟ್ ಒಳಗೆ ಬಾತ್ ಸಾವಿತ್ರಿ.

ಇದ್ ಸಾವಿತ್ರನ ದಿನಚರಿ ಆಗಿತ್. ದಿನಾ ಮಂಜ ಬಂದದೆತ ಕಾಯದೇ ಆಗಿತ್.

* * * *

ಸಾವಿತ್ರಿ-ಶಂಕರಂಗೆ ಹೇಮಂತ್ ಒಬ್ಬನೇ ಮಂಜ. ಶಂಕರ ಕಂದಾಯ ಇಲಾಖೆಲಿ ಗುಮಾಸ್ತ ಆಗಿ ಕೆಲ್ಸ

ಮಾಡ್ತಿತ್ತ್. ಬರ್ತಿದ್ದ ಸ್ವಲ್ಪ ಸಂಬಳಲಿ ಹಂಗೂ ಹಿಂಗೂ ಉಳ್ಸಿ ಒಂದ್ ಮನೆ ಮಾಡಿಕೊಂಡಿದ್ದೊ.

ಹೇಮಂತ್ ಬಾಳಾ ಚುರುಕಾಗಿತ್ತ್. ಓದ್‌ಲಿ ಮುಂದೆ ಇತ್ತ್. ಇರ್ವ ಒಬ್ಬ ಮಂಙಂಗೆ ಒಳ್ಳೆ ವಿದ್ಯೆ ಕೊಡಕುತ ಅಪ್ಪ-ಅಮ್ಮನ ಆಶೆ ಆಗಿತ್ತ್. ಹಂಗೆ ಹೇಮಂತ್ ಲಾಯ್ಕ ಓದಿ ಇಂಜಿನಿಯರ್ ಆಗಿ ದೊಡ್ಡ ಕಂಪೆನಿಲಿ ಕೆಲ್ಸನೂ ಸಿಕ್ಕಿತ್ತ್.

ಹೇಮಂತನಿಗೆ ಚಾಕರಿ ಸಿಕ್ಕಿದೇ ತಡ ಅವಂಗೆ ಮದ್ವೆ ಮಾಡಿಕೆ ಹೆಣ್ಣು ಕೊಡವು ನಾ ಮುಂದೆ ತಾ ಮುಂದೆತ ಬಾಕೆ ಶುರು ಆಗಿದ್ದೊ.

ಸಮಾಜನೇ ಹಂಗೆ ಅಲಾ, ಹೈದಗಳ್ನ ಕಷ್ಟಪಟ್ಟ್ ಸಾಕಿ ಓದ್ಸಿ ಚಾಕ್ರಿಗೆ ಹೋದ ಮ್ಯಾಲೆ ಅವರ ಮ್ಯಾಲೆ ಅಧಿಕಾರ ಯಾರಿಗೊ! ಇನ್ನ್ ಮದ್ವೆ ಆದ ಮ್ಯಾಲೆ ಮುಗ್ದೇ ಹೋತ್ ಅಪ್ಪ-ಅಮ್ಮ ಲೆಕ್ಕಕ್ಕೇ ಇರ್ದುಲೆ!

ಹೇಮಂತನ ಕತೆನೂ ಹಂಗೇ ಆತ್. ಬೆಂಗ್ಳೂರ್‌ಲಿ ಚಾಕ್ರಿಲಿ ಇದ್ದ ಅವಂಗೆ ಅಲ್ಲೆ. ಚಾಕ್ರಿಲಿ ಇದ್ದ ದೀಪಾನೊಟ್ಟಿಗೆ ಮದ್ವೆ ಆಗಿತ್ತ್. ಅವ್ರ ಮನೆಯವು ಸಹ ಬೆಂಗ್ಳೂರ್‌ಲೇ ಇದ್ರಂದ ಹೇಮಂತ್-ದೀಪಾ ಅಪರೂಪಕ್ಕೆ ಒಮ್ಮೆ ಇತ್ತ ಬಾತಿದ್ದೊ.

ಈ ನಡುಲಿ ಶಂಕರಂಗೆ ಕಾಯಿಲೆ ಬಂದ್ ಹಾಸಿಗೆ ಹಿಡ್ತ್. ಹೇಮಂತ್ ಮತ್ತೆ ದೀಪಾ ಒಂದೆರಡ್ ದಪ ಬಂದ್ ನೋಡಿ ದುಡ್ಡ್ ಕಳ್ಸಿನೆತ ಹೇಳಿ ಹೋಗಿದ್ದೊ. ಮತ್ತೆ ತಿಂಗ ತಿಂಗ ದುಡ್ಡ್ ಕಳ್ಸ್‌ತಿದ್ದೊ.

ದುಡ್ಡ್ ಕಳ್ಸಿರೆ ಎಲ್ಲಾ ಆತ್‌ತ ಅವ್ರ ಗ್ಯಾನ ಆಗಿತ್ತ್. ಆದರೆ ಕಾಯಿಲೆ ಮನ್ಸನ ನೋಡಿಕಂಬ ಕಷ್ಟ ನೋಡಿ ಕಂಬವಂಗೇ ಗೊತ್ತ್.

ಶಂಕರನ ಆಸ್ಪತ್ರೆಗೆ ಸೇರ್ಸಿರೂ ಪ್ರಯೋಜನ ಆತ್‌ಲೆ. ಅಂವ ಆರು ತಿಂಗ ನರಳಿ ತೀರಿಕಣ್ತ್.

ಹೇಮಂತ್-ದೀಪಾ ಹದಿನೈದ್ ದಿನ ರಜ ಹಾಕಿ ಬಂದ್ ಅಪ್ಪನ ಕಾರ್ಯ ಮಾಡಿ ಹೋಗಿದ್ದೊ. ಬಾಯಿ ಮಾತಿಗೂ ಅಮ್ಮನ ಮುಂದೆ ಎಂತ ಮಾಡಿಯಾತ ಕೇಳ್ತ್‌ಲೆ.

ಶಂಕರನ ತಿಥಿ ಕಳಿಯಕ್ಕೆ ಮುಟ್ಟ ಅವು-ಇವುತ ಮಾತಾಡ್ಸಿಕೆ ಬರವು ನೆಂಟರ್ ಮನೆಲಿ ಇದ್ರಂದ ಸಾವಿತ್ರಿಗೆ ಏನೂ ಗೊತ್ತಾಗಿತ್ಲೆ. ಆದರೆ ತಿಥಿ ಕಳ್ದ್ ಎಲ್ಲಾ ಹೋದ ಮ್ಯಾಲೆ ಅವ್ಳಿಗೆ ತಾನ್ ಒಂಟಿ ಅನ್ಸಿತ್.

ಹೇಮಂತ್-ದೀಪಾ ಅವ್ರ ಪ್ರಪಂಚಲೇ ಮುಳ್ಗಿ ಹೋಗಿದ್ದೊ. ವಾರಕ್ಕೆರಡ್ ದಪ ಫೋನ್ ಮಾಡಿ ವಿಚಾರ್ಸಿಕಂಬತಿತ್ತ್. ಹಂಗೆ ದುಡ್ಡುನೂ ಕಳ್ಸ್‌ತಿತ್ತ್.

ಮತ್ತೆ ಆಫೀಸ್–ಮನೆ, ಶನಿವಾರ–ಐತ್ವಾರ ವೀಕೆಂಡ್ ಪಾರ್ಟಿ–ಪಿಕ್‌ನಿಕ್ ಹಿಂಗೆ ಕಳ್ದ್ ಹೋಗ್ತಿತ್ತ್. ದಿನಗ ಉರುಳಿ ಹೋಗಿದ್ದೊ.

* * * * *

ಅಂದ್ ದೀಪಾನ ಅಮ್ಮ, ಮನೆಗೆ ಬಂದವು, ನಮ್ಮ ಮನೆ ಹತ್ರ ಒಳ್ಳೆ ಫ್ಲಾಟ್ ಉಟ್ಟ್, ತಕಣಿತ ಹೇಳ್ತ್.

ದೀಪಂಗೆ ಅಮ್ಮನ ಮಾತೇ ವೇದವಾಕ್ಯ. ಅವ್ಳು ಹೇಮಂತನ ಪೀಡ್ಸಿಕೆ ಶುರು ಮಾಡ್ತ್. ಆದರೆ ಹೇಮಂತ್‌ನ ಹತ್ರ ದುಡ್ಡಿತ್‌ಲೆ. ಅವಂಗೂ ತಿಂಗ ತಿಂಗ ಬಾಡಿಗೆ ಕೊಟ್ಟ್ ಸಾಕಾಗಿತ್ತ್. ನೋಡೋನತೇಳಿ ಸುಮ್ಮನಾತ್.

ಸ್ವಲ್ಪ ದಿನ ಕಳ್ದ್ ಮತ್ತೆ ದೀಪನ ಅಮ್ಮ ಬಂದವು ಮನೆ ತಕಂಬ ವಿಷ್ಯ ಎಂತಾತ್‌ತ ಕೇಳ್ತ್. ಆದರೆ, ದುಡ್ಡಿಗೆ ತೊಂದರೆತ ದೀಪಾ ಹೇಳ್ತ್.

"ಅದ್ಕೆ ಯಾಕೆ ಚಿಂತೆ ಮಾಡ್ರೆ ಊರ್‌ಲಿ ಇರ್ವ ಮನೆ ಮಾರಿ ಬುಡಿ. ಅಲ್ಲಿಗೆ ಇನ್ನ್ ಹೋಗಿ ಬದ್ಕಿಕೆ ಆದೆನಾ"

ಅತ್ತೆನ ಮಾತ್ ಹೇಮಂತ್‌ಗೂ ಸರಿ ಅನ್ಸಿತ್.

"ಸರಿ ಅತ್ತೆ ಈ ವೀಕೆಂಡ್ ಮನೆಗೆ ಹೋಗಿ ಅಮ್ಮನೊಟ್ಟಿಗೆ ಮಾತಾಡ್ನೆ"

"ಉದಾಸೀನ ಮಾಡ್ಬಡ ಈ ವಾರನೇ ಹೋಗಿ ಬ್ರೋಕರ್‌ನ ಹಿಡ್ದ್ ಮಾರಿ ಬಾ"

"ಸರಿ ಅತ್ತೆ"

ಹೇಮಂತ್–ದೀಪಾ ಶುಕ್ರವಾರ ನೈಟ್ ಬಸ್ಸ್‌ಲಿ ಊರಿಗೆ ಬಂದೊ. ಸಾವಿತ್ರಿಗೆ ಬಾಳ ಕುಶಿ ಆತ್. ಮಂಜ–ಸೊಸೆನ ನೋಡದೆ ಸುಮಾರ್ ದಿನ ಆಗಿತ್ತ್. ಹೇಮಂತ್ ಬನ್ನೆತ ಫೋನ್ ಮಾಡಿ ಹೇಳಿದ್ರಂದ ಗದ್ದಾಳ್ ಮಾಡಿ ಇಸಿತ್ತ್ ಸಾವಿತ್ರಿ.

ಮಾರನೆ ದಿನ ಹೇಮಂತ್,

"ಅಮ್ಮ ನಾವು ನಾಳೆ ಹೊರ್ಡಕು. ಸೋಮಾವರ ಆಫೀಸ್ ಉಟ್ಟಲ್ಲ"

"ಸರಿ ಅಪ್ಪ"

"ಅಮ್ಮ ನಾನ್ ಒಂದ್ ವಿಷ್ಯ ನಿನ್ನತ್ರ ಮಾತಾಡೋಕು. ನೀನ್ ನಮ್ಮೊಟ್ಟಿಗೆ ಬಂದ್ ಬುಡ್. ಇಲ್ಲಿ ಒಬ್ಬಳೇ ಎಂತ ಮಾಡಿಯಾ"

ಸಾವಿತ್ರಿಗೆ ಬಾಳಾ ಕುಶಿ ಆತ್.

"ಆದರೆ ಮನೆ ಬುಟ್ಟ್ ಬಂದರೆ ಎಲ್ಲಾ ಹಾಳಾದ್ಯಲ್ಲಪ್ಪಾ"

"ಅಮ್ಮ ಅದೇ ವಿಚಾರಕ್ಕೆ ನಾನ್ ಬಂದದ್. ಬೆಂಗಳೂರ್ಲಿ ಮನೆ ಬಾಡಿಗೆ ಬಾಳಾ ಜಾಸ್ತಿ. ಬಾಡಿಗೆ ಕೊಟ್ಟ್ ಕೊಟ್ಟ್ ಸಾಕಾದೆ. ಅದ್ಕೆ ಒಂದ್ ಮನೆ ತಕಣಕುತ ಗ್ಯಾನ ಮಾಡ್ಯೊಳೆ"

"ಒಳ್ಳೆದಪ್ಪಾ ಹಂಗೇ ಮಾಡ್"

"ಆದರೆ ಅಮ್ಮಾ ನನ್ನ ಹತ್ರ ದುಡ್ಡಿಲ್ಲೆ ಅದ್ಕೇ..."

"ಅದ್ಕೆ ಎಂತ"

"ಅದ್ಕೆ ಈ ಮನೆನ ಮಾರಿ ಬುಡ್ಯೊ. ನೀನ್ ನಮ್ಮೊಟ್ಟಿಗೆ ಬಂದ್ ಬುಡ್. ನಂಗಂತು ಇಲ್ಲಿ ಬಂದ್ ಇರಿಕೆ ಆದುಲೆ"

"ಇದ್ ನಿನ್ನ ಅಪ್ಪ ಕಷ್ಟಪಟ್ಟ್ ಮಾಡ್ದ ಆಸ್ತಿ. ಈಗ ಮಾರಿಕೆ ನಂಗೆ ಇಷ್ಟ ಇಲ್ಲೆ"

"ಅತ್ತೆ ನಿಮ್ಗೂ ವಯಸ್ಸಾತ್. ಇಲ್ಲಿ ಒಬ್ಬರೇ ಇದ್ದರೆ ನಮಿಗೂ ಕಷ್ಟ. ಆಗಾಗ ಬಂದು ನೋಡಿಕೆ ಸ ಆದುಲೆ" ಇಷ್ಟೊತ್ತ್ ಮಾತಾಡದೇ ಇದ್ದ ದೀಪ ಹೇಳ್ತ್.

ಸಾವಿತ್ರಿ ಮನಸ್ಸಿಲ್ಲದ ಮನ್ಸ್‌ಲಿ ಒಪ್ಪಿಗೆ ಕೊಟ್ಟತ್.

ಹೇಮಂತ್ ಅಂದೇ ಬ್ರೋಕರ್‌ನ ಕಂಡ್ ಮನೆ ಮಾರಿಕೆ ವ್ಯವಸ್ಥೆ ಮಾಡ್ತ್. ಅವಿಬ್ಬರೂ ಮಾರನೇ ದಿನ ಹೊರ್ಟ್ ಹೋದೊ. ಸಾವಿತ್ರಿ ಅಂದ್ ಕಣ್ಣೀರ್ ಹಾಕಂಡೇ ಕಾಲ ಕಳ್ತ್.

ಮತ್ತೆ ಒಂದೆರಡ್ ತಿಂಗಲಿ, ಮನೆ ಮಾರಿ ಹೋತ್. ಮನೆ ತಕಂಡವು ಮನೆ ಖಾಲಿ ಮಾಡಿಕೆ ಸ್ವಲ್ಪ ಸಮಯ ಕೊಟ್ಟಿದ್ದೊ. ಸಾವಿತ್ರಿಗೆ ತನ್ನ ಸರ್ವಸ್ವವೂ ಕಳ್ಕಂಡಂಗೆ ಆಗಿತ್ತ್. ಈಗ ತಾನ್ ನಿರ್ಗತಿಕಳಾದಂಗೆ ಅನ್ನಿಬುಡ್ತ್. ಗ್ಯಾನ ಮಾಡಿ ಮಾಡಿ ಕಣ್ಣೀರ್ ಹಾಕಿತ್. ತನ್ನ ಗಂಡ ಕಷ್ಟಪಟ್ಟ್ ಮಾಡ್ದ ಒಂದೇ ಒಂದ್ ಆಸ್ತಿತೇಳ್ರೆ ಈ ಮನೆ. ಅದೂ ಈಗ ಇಲ್ಲದೆ ಆಗಿತ್ತ್.

ಹೇಮಂತ್ ಶನಿವಾರ ಬನ್ನೆ ಎಲ್ಲಾ ಪ್ಯಾಕ್ ಮಾಡಿ ಮಡ್ಕ. ಬೆಂಗ್ಳೂರ್‌ಗೆ ಕರ್ಕಂಡ್ ಹೋನೆತ ಫೋನ್ ಮಾಡಿತ್ತ್.

ಸಾವಿತ್ರಿ ಅದೇ ಊರ್‌ಲಿ ಇದ್ದ ನೆಂಟರಿಷ್ಟರ್‌ಗೆಲ್ಲಾ ಹೇಳಿ ಬಾತ್. ಕಡೇಲಿ ತನ್ನ ಕಷ್ಟಕ್ಕೆ ಆಗ್‌ತ್ತಿದ್ದ ದೊಡ್ಡವ್ವನ ಮಂಜಗೆ ಹೇಳ್ದೂತ ಹೊರ್ಟತ್.

"ಬಂದಾ ಸಾವಿತ್ರಿ, ಯಾಕೆ ಕೆಮ್ಮುತ್ತಾವಳಾ"

"ಎಂತದೋ ಗೊತ್ತ್‌ಲೆ ಅಣ್ಣ ಸುಟ್ಟ ಕೆಮ್ಮುಲು ಹಿಡ್ದುಟ್ಟು"

"ಅಲ್ಲಾ, ಮನೆ ಮಾರಿ ಬುಟ್ಟಂತೆ ಮತ್ತೆ ಎಂತ ಮಾಡಿಯಾ" ಒಳಗಿಂದ ಬಂದ ಅತ್ತಿಗೆ ಕೇಳ್ತ್.

"ಹೇಮಂತ್ ಹೊಸ ಮನೆ ತೆಗ್ದುಟ್ಟಂತೆ, ಶನಿವಾರ ಬಂದ್ ಕರ್ಕಂಡ್ ಹೊನೆತ ಫೋನ್ ಮಾಡಿಟ್ಟು. ಅದ್ಕೆ ಹೇಳಿಬುಟ್ಟ್ ಪೋಯಿತ ಬಂದೆ"

"ವಳ್ಳದಾತ್ ಬುಡ್ ಇಷ್ಟ್ ವರ್ಷ ಬಾಳಾ ಕಷ್ಟ ಪಟ್ಟ್ ಮಂಜನ ಸಾಕ್ಯೊಳ. ಅಂವ ವಳ್ಳ ಕೆಲ್ಸಲಿ ಉಟ್ಟಲ್ಲಾ ಸಾಕಿದೆ ಬುಡ್"

"ಏನೋ ಅಣ್ಣ ನಂಗೆ ಒಂದೂ ಗೊತ್ತಾಗ್ತಾ ಇಲ್ಲೆ, ಅಲ್ಲಿ ಹೆಂಗೊ ಏನೊ."

"ಎಲ್ಲಾ ಸರಿಯಾದೆ ಬುಡ್. ಏನಾರ ತೊಂದರೆ ಆದರೆ ನಂಗೆ ಫೋನ್ ಮಾಡ್, ನಾನ್ ಏನಾರ ಸಹಾಯ ಮಾಡ್ನೆ"

"ಸರಿ ಅಣ್ಣ ಬನ್ನೆ"

"ಎಲ್ಲಿಗೆ ಹೋದು, ಊಟ ಮಾಡಿಕಂಡ್ ಹೋಗು"ತ ಅತ್ತಿಗೆ ವಳಗೆ ಕರ್ಕಂಡ್ ಹೋತು. ಸಾವಿತ್ರಿ ಊಟ ಮಾಡಿಕಂಡ್ ಹೊರ್ಟತ್.

* * * * *

"ದೀಪಾ, ಅಮ್ಮಂಗೆ ಕೋಂಬರೆ ರೆಡಿ ಮಾಡ್ಯೊಳಾ? ನಮ್ಮ ಪಕ್ಕದ ಬೆಡ್ ರೂಂಲಿ ಇರ್ಲಿ ಅಲಾ"

"ಅಲ್ಲಿ ನೆಂಟರ್ ಬಂದರೆ ಬೇಕಾದೆತ ಸ್ಟೋರ್ ರೂಂನ ಕ್ಲೀನ್ ಮಾಡ್ಸಿ ಬೆಡ್ ಹಾಕ್ಸಿವಳೆ"

"ನೆಂಟರ್ ಬಂದರೆ ಗೆಸ್ಟ್ ರೂಂ ಉಟ್ಟಲ್ಲ. ಸ್ಟೋರ್ ರೂಂ ಬಾಳಾ ಸಣ್ಣದುಟ್ಟು,

"ನಿಮ್ಮ ಅಮ್ಮ ಯಾಗೋಳೂ ಕೆಮ್ಮಿಕಂಡ್ ಪಕ್ಕದ ರೂಂಲಿ ಇದ್ದರೆ ನಂಗೆ ನಿದ್ದೆ ಬಾದುಲೆ. ಅದಲ್ಲದೆ ಅವ್ಕೆ ಅಂತಹ ರೂಂಲಿ ಇದ್ದ್ ಅಭ್ಯಾಸ ಉಟ್ಟಲ್ಲ."

"ಕೂಸೂ, ನೀವ್ಯಾಕೆ ಜಗಳ ಆಡ್ರೆಪ್ಪಾ, ನಂಗೆ ಎಲ್ಲಾರ ಒಂದ್ ಕಡೆ ಆದೆ"

"ಸರಿ ಅಮ್ಮಾ ಬಾ ಎಲ್ಲಾ ಸರಿ ಮಾಡಿ ಕೊಟ್ನೆ. ನೀನ್ ಏನ್ ಗ್ಯಾನ ಮಾಡ್ಬಡ"

"ನಂಗೆ ನಿನ್ನ ಪರಿಸ್ಥಿತಿ ಅರ್ಥ ಆದೆಪ್ಪಾ, ಅದ್ಕೆ ನಾನ್ ಬಾದುಲೆ ಅಲ್ಲೇ ಎಲ್ಲಾರ ಇದ್ದನೆತ ಹೇಳ್ದ್."

"ನೀನ್ ಅಲ್ಲಿ ಇದ್ದರೆ ನಂಗೆ ನೆಮ್ಮದಿ ಇರ್ದುಲೆ ಅಮ್ಮಾ, ಹೆಂಗೋ ಒಟ್ಟಿಗೆ

ಇರನ ಬುಡ್"

"ಸರಿ ಬುಡಪ್ಪಾ"

ಹೇಮಂತ್- ದೀಪಾ ಇಬ್ಬರ್ ಬೆಳಿಗ್ಗೆ ಆಫೀಸಿಗೆ ಹೋದ ಮ್ಯಾಲೆ ಮನೆಲಿ ಸಾವಿತ್ರಿ ಒಂಟಿಯಾಗಿರ್‌ತ್ತಿತ್ತ್.

ದೀಪಾನೆ ಅಡಿಗೆ ಮಾಡಿ ಟೇಬಲ್‌ಲಿ ಮಡ್ಗಿ ಹೋಗ್‌ತಿತ್ತ್. ಮತ್ತೆ ಅವು ಮನೆಗೆ ಬಾದು ಸಾಯಂಕಾಲನೇ.

ಹೇಮಂತ್ ಇರ್ಕನ ಸಾವಿತ್ರಿನ ಲಾಯ್ಕ ನೋಡ್ಕಣ್‌ತ್ತಿದ್ದ ದೀಪಾ ಅಂವ ಇಲ್ಲದಿರ್ಕನ ಸಿಡಿ ಸಿಡಿ ಆಡ್ತಿತ್ತ್.

ವೀಕೆಂಡ್‌ತೇಳಿ ಮನೆಗೆ ಫ್ರೆಂಡ್ಸ್‌ಗ ಬಾದು ಪಾರ್ಟಿ ಮಾಡ್ದು ನಡಿಯತ್ತಿತ್ತ್. ಆಗೆಲ್ಲಾ ದೀಪಂಗೆ ಅತ್ತೆನ ಪರಿಚಯ ಮಾಡ್ಸಿಕೇ ನಾಚಿಕೆ ಆಗ್ತಿತ್ತ್. ಒಂದೊಂದ್ ವಾರ ಒಬ್ಬೊಬ್ಬ ಫ್ರೆಂಡ್‌ಗಳ ಮನೆಲಿ ಪಾರ್ಟಿ ನಡಿಯತಿತ್ತ್

ದೀಪಾನ ಅಪ್ಪ-ಅಮ್ಮ ಆಗಾಗ ಬಂದ್ ಹೋಗಿ ಮಾಡ್ತಿದ್ದೊ. ಆಗೆಲ್ಲಾ ಸಾವಿತ್ರಿಗೆ ಬಾಳಾ ಕಷ್ಟ ಆಗ್‌ತಿತ್ತ್.

ದೀಪಾನ ಅಮ್ಮ ಅಂತು "ನೀನ್ ಇವ್ಕೆ ಭಾರ ಆಗೊಳ"ತೇಳ್ವಂಗೆ ಮಾತಾಡಿ ಹೋಗ್‌ತಿತ್ತ್.

ಬರ್ತಾ ಬರ್ತಾ ಹೇಮಂತಂಗೂ ಕಿರಿ ಕಿರಿ ಶುರು ಆಗಿತ್ತ್. ದೀಪ ಪ್ರತಿಯೊಂದಕ್ಕೂ ಸಿಡ್ಕಿಕಂಡ್ ಆಡ್ಕನ ಮನೆಲಿ ನೆಮ್ಮದಿ ಇತ್ತ್‌ಲೆ. ಸಾವಿತ್ರಿನ ಆಸ್ಪತ್ರೆ ಖರ್ಚ್ ಅದ್-ಇದ್‌ತ ಅವಂಗೆ ಖರ್ಚ್ ಜಾಸ್ತಿ ಆಗಿತ್ತ್.

ಹಂಗೂ ಇಂಗೂ ವರ್ಷ ಕಳಿಯಕನ ಸಾವಿತ್ರಿ ತನಿಗೆ ಇನ್ನ್ ಇಲ್ಲಿ ಇರ್ದು ಸಾಧ್ಯ ಇಲ್ಲೆತೇಳ್ವ ಮಟ್ಟಕ್ಕೆ ಬಂದಿತ್ತ್. ಅವ್ವ ಹೇಮಂತ್‌ಗೆ ತನ್ನನ್ನ ಊರಿಗೆ ಕಳ್ಸಿಬುಡ್‌ತ ಹೇಳಿಕೆ ಶುರು ಮಾಡ್ತ್.

ಅವಂಗೆ ದಾರಿ ಕಾಣದಾತ್. ಒಂದಿನ ಅಮ್ಮನ ಕರ್‍ಕೊಂಡೋಗಿ ವೃದ್ಧಾಶ್ರಮಕ್ಕೆ ಸೇರ್ಸಿ ಆಗಾಗ ಬನ್ನೆತ ಹೇಳಿ ನೆಮ್ಮದಿಲಿ ಹೊರ್‍ಟು ಹೋಗಿತ್ತ್. ದೀಪಾ ಅಂತು ಪೀಡೆ ಕಳ್ತ್‌ತೇಳ್ವಂಗೆ ಉಸುರ್ ಬುಟ್ಟಿತ್. ಮತ್ತೆ ಆಗೊಮ್ಮೆ-ಈಗೊಮ್ಮೆ ಫೋನ್ ಮಾಡ್ದು ದುಡ್ಡು ಕಳ್ಸುದ್ ಬುಟ್ಟರೆ ನೋಡಿಕೆ ಹೋತ್‌ಲೆ.

* * * * *

ಅಂದ್ ಹೇಮಂತ್‌ನ ಫ್ರೆಂಡ್ ಭರತ್ ಮನೆಲಿ ವೀಕೆಂಡ್ ಪಾರ್ಟಿ ಇತ್ತ್.

ಹೇಮಂತ್-ದೀಪಾ ಇಬ್ಬರೂ ಹೋಗಿದ್ದೊ. ಭರತ್-ಹೇಮಂತ್ ಕಾಲೇಜಿಗೆ ಹೋಕಾಕನೇ ಫ್ರೆಂಡ್ಸ್ ಆಗಿದ್ದವು.

ಹೇಮಂತ್‌ನ ಕಂಡ್ ಅಂವ ಕುಶಿಂದ ಒಳಗೆ ಕರ್ಕಂಡ್ ಹೋಗಿ ಮನೆಯವ್ಕೆ ಪರಿಚಯ ಮಾಡ್ಸಿತ್. ಅಂದ್ ಅವನ ದೊಡ್ಡವ್ವ ಊರ್‌ಂದ ಬಂದಿದ್ದೊ.

"ಮೀಟ್ ಮೈ ಡಾರ್ಲಿಂಗ್"ತೇಳಿ ತನ್ನ ದೊಡ್ಡವ್ವನ ಪರಿಚಯ ಮಾಡ್ಸಿತ್. ಅವನ ಅಮ್ಮನ ಅಕ್ಕಂಗೆ ಭರತ್‌ತೇಳ್ರೆ ಬಾಳಾ ಪ್ರೀತಿ. ಅವ್ಕೆ ಮಕ್ಕ ಇತ್ತ್‌ಲೆ. ಹಂಗಾಗಿ ಭರತ್‌ನ ಮಂಜನಂಗೆ ಪ್ರೀತಿ ಮಾಡ್ತಿದ್ದೊ.

"ದೊಡ್ಡವ್ವ, ಇಂವ ಹೇಮಂತ್‌ನ ನನ್ನ ಫ್ರೆಂಡ್ ಮಡಿಕೇರಿಯಂವ"

"ಮಡಿಕೇರಿಯವನಾ.. ನಾನ್ ಅಲ್ಲಿ ವಾರ್ಡನ್ ಆಗಿ ಕೆಲ್ಸ ಮಾಡ್ಯೊಳೆ. ಅಲ್ಲಿ ಯಾರ ಮಂಜ"

"ಶಂಕರತ ಕಂದಾಯ ಇಲಾಖೆಲಿ ಇದ್ದೊ. ಅಪ್ಪ ಈಗ ಇಲ್ಲೆ"

"ಶಂಕರತೇಳ್ರೆ... ಅಮ್ಮನ ಹೆಸ್ರ್ ಸಾವಿತ್ರಿನಾ"

"ಹೌದು ನಿಮಿಗೆ ಹೆಂಗೆ ಗೊತ್ತ್"

"ಗೊತ್ತಿಲ್ಲದೆ ಏನ್ ನಾನ್ ಅಲ್ಲಿ ಅನಾಥಾಶ್ರಮಲಿ ಕೆಲ್ಸ ಮಾಡ್ತಿದ್ದದ್. ಅದ್ಸರಿ ಅಮ್ಮ ಈಗ ಹೆಂಗೊಳೊ?"

ಹೇಮಂತ್ ತಲೆ ತಗ್ಗಿಸಿ ಹೇಳ್ತ್, "ಅಮ್ಮ ಈಗ ನಮ್ಮೊಟ್ಟಿಗೆ ಇಲ್ಲೆ, ಮಡಿಕೇರಿಲಿ ಇದ್ದನೆತ ಹಟ ಮಾಡ್ತ್. ನನ್ನ ಹೆಣ್ಣಿಗೂ ಅಮ್ಮಂಗೂ ಸರಿ ಬಾತ್‌ಲೆ."

"ಓ.. ಮನೆಲಿ ಒಬ್ಬಳೇ ಉಟ್ಟಾ"

ಹೇಮಂತ್‌ನ ಮುಖ ಬಾಡಿ ಹೋತ್, "ಇಲ್ಲೆ ಆ ಮನೆ ಮಾರಿ ಇಲ್ಲಿ ನಾನ್ ಮನೆ ತಕಂಡೆ. ಅಮ್ಮ ಈಗ ವೃದ್ಧಾಶ್ರಮಲಿ ಉಟ್ಟು"ತೇಳ್ತ್ ಮೆಲ್ಲೆ.

"ಚೆ, ಪಾಪ ಸಾವಿತ್ರಿಗೆ ಎಂತಾ ಸ್ಥಿತಿ ಬಾತ್, ನೀನ್ ಮನ್ಸನಾ ಎಂತ. ಅಮ್ಮನ ನೋಡ್ಕಣಿಕೆ ಯೋಗ್ಯತೆ ಇಲ್ಲದ ಮ್ಯಾಲೆ ಅವರ ಮನೆ ಮೇಲೆ ನಿಂಗೆ ಎಂತ ಹಕ್ಕು ಉಟ್ಟು. ಅದ್ಕೆ ಹೇಳ್ವು ಸ್ವಂತ ಮಕ್ಕ ಮಕ್ಕಳೆತ"

"ಅಂದರೆ, ನೀನ್ ಎಂತ ಹೇಳ್ವು ದೊಡ್ಡವ್ವ" ಕೇಳ್ತ್ ಭರತ್ ಆಶ್ಚರ್ಯಲಿ

"ಪಾಪ ಶಂಕರ-ಸಾವಿತ್ರಿಗೆ ಮಕ್ಕ ಇತ್ತ್‌ಲೆ. ನಾನ್ ಅಲ್ಲಿ ವಾರ್ಡನ್ ಆಗಿರ್ಕನ.. ಇಂವನ ದತ್ತ್ ತಗಂಡದ್. ಹೊಟ್ಟೆ ಬಟ್ಟೆ ಕಟ್ಟಿ ಇವನ ಓದ್ಸಿದೊ. ಈಗ ನೋಡು ಇಂವ ಇರಕಾದ ಜಾಗಲಿ ಅಮ್ಮನ ಬುಟ್ಟುಟ್ಟು. ಸ್ವಂತ ಮಂಜ ಆದರೆ ಹಿಂಗೆ ಮಾಡಿದ್ರಾ.. ಥೂ ಪಾಪಿ"

ಹೇಮಂತ್ ಕುಸ್ದ್ ಹೋತು. ಒಟ್ಟಿಗೆ ಇದ್ದ ದೀಪಾನು ತಲೆ ತಗ್ಗಿಸ್ತ್.

ಇಬ್ಬರೂ ಪಶ್ಚಾತಾಪಲಿ ಬೆಂದ್ ಹೋದೊ.

"ಆಂಟಿ ದಯವಿಟ್ಟು ನಮ್ಮನ್ನ ಕ್ಷಮಿಸಿ ಬುಡಿ. ನಮ್ಮಿಂದ ಬಾಳಾ ದೊಡ್ಡ ತಪ್ಪು ಆಗುಟ್ಟು. ನಾಳೆನೇ ಹೋಗಿ ಅಮ್ಮನ ಕರ್‍ಕಂಡ್ ಬನ್ನೆ. ಇನ್ನೆಂದೂ ಅಮ್ಮನ ದೂರ ಮಾಡ್ತುಲೆ"ತ ಗೋಳಾಡ್ತ್. ನಾನೆಂತಾ ಪಾಪಿತ ತಲೆ ಚಚ್ಚಿ ಕಣ್ತ್.

* * * * *

ಹೇಮಂತ್-ದೀಪಾ ವೃದ್ಧಾಶ್ರಮಕ್ಕೆ ಬಾಕನ ಎದ್ರುಗೆ ಸಿಕ್ಕಿದ ವಾರ್ಡನ್ ಕೆಕ್ಕರ್‌ಸಿ ನೋಡಿ ಒಳಗೆ ಹೋತು. ಮೆಲ್ಲೆ ಒಳಗೆ ಹೋದೊ. ಅಮ್ಮ ಎಲ್ಲೂ ಕಾಂಬಕೆ ಸಿಕ್ಕಿತ್‌ಲೆ. ಕಡೆಲಿ ಒಂದ್ ಕೋಂಬರೆಲಿ ಎಲ್ಲವೂ ಗುಡ್ಡೆ ಸೇರಿದ್ದೊ.

ಹೌದು ಸಾವಿತ್ರಿ ಜೀವಚ್ಚವವಾಗಿ ಮಲ್ಗಿತ್ತ್. ಆದರೆ ಆ ಕಣ್ಣ್‌ಗ ಯಾರನ್ನೋ ಹುಡ್ಕುವಾಂಗೆ ಕಾಂಬತಿತ್ತ್.

ಹೇಮಂತ್ ಹತ್ರ ಹೋದಂವ ಸಾವಿತ್ರಿನ ಕಾಲ್ ಮ್ಯಾಲೆ ಬಿದ್ದ್ ಗೋಳಾಡ್ತ್.

ಮಂಜನ ಕಾದ್ ಕಾದ್ ಜೀವ ಸೋತು ಹೋಗಿತ್ತ್. ಹೇಮಂತ್‌ನ ಸ್ವರ ಕೇಳಿ ಅವಳ ಮುಖ ಅರಳಿತ್. ಹತ್ರ ಬಾ ತ ಕೈಭಾಷೆ ಮಾಡ್ತ್.

"ಅಮ್ಮಾ ನನ್ನ ಕ್ಷಮಿಸಿ ಬುಡಮ್ಮಾ ನಾನ್ ತಪ್ಪು ಮಾಡಿಬುಟ್ಟೆ. ನಾನ್ ನಿನ್ನ ಬೆಂಗ್ಳೂರಿಗೆ ಕರ್‍ಕೊಂಡ್ ಹೋಗಿ ಲಾಯ್ಕ ನೋಡಿಕಣೆ. ನೀನ್ ಉಸಾರಾದಿಯಾ ನಾನ್ ಬಂದೊಳೆ ನೋಡ್"ತೇಳಿ ಸಾವಿತ್ರಿನ ಮುಖ ಹಿಡ್ದ್ ಹೇಳ್ತ್ ಹೇಮಂತ್. ಸಾವಿತ್ರಿನ ಮುಖಲಿ ಕಿರುನಗೆ ಮೂಡ್ತ್. ಮತ್ತೆ ಒಂದ್ ಗಳಿಗೆಲಿ ಹೇಮಂತ್ ಹಿಡ್ದಿದ್ದ ಕೈ ಜಾರಿ ಬಿದ್ದೋತ್. ಮಂಜನ ಕಾದ್‌ಕಂಡಿದ್ದ ಸಾವಿತ್ರಿನ ಪ್ರಾಣ ಪಕ್ಷಿ ಹಾರಿ ಹೋಗಿತ್ತ್. ಕಾಲ ಮಿಂಚಿ ಹೋಗಿತ್ತ್.

ಅಂದ್ ವಯಸ್ ಕಾಲಲಿ ಆಸರೆ ಆದುತ ಅನಾಥ ಕೂಸ್‌ನ ಸಾಕಿ ಬೆಳ್ಸಿದ್ದೊ. ಆದರೆ ನೀರ್ ನೀರೆ ರಕ್ತ ರಕ್ತನೆತೇಳ್ವ ಮಾತ್ ನಿಜ ಆಗಿತ್ತ್."

* * * * *

# ಮೂಲ ನಕ್ಷತ್ರ

**ಧಾರಕಾರವಾಗಿ** ಮಳೆ ಸುರಿಯತಿತ್ತ್. ಹೊರಗೆ ವೆರಾಂಡಲಿ ಕುರ್ಚಿಗೆ ವರ್‍ಗಿ ಕುದ್ದ್ "ಮತ್ತೆ ಸಿಕ್ಕಿತ್ ಕುಂಕುಮ" ಕಾದಂಬರಿ ಓದ್‌ತಿದ್ದ ರಮ್ಯ ಒಂದ್ ಗಳಿಗೆ ಮಳೆನೇ ದಿಟ್ಟಿಸಿ ನೋಡ್ತ್. ಹಂಚಿನ ಸೆರೆಂದ ಸುರಿಯುತಿದ್ದ ಮಳೆಯ ಮಾಲೆ, ಮಧ್ಯಂದ ಬೀಳ್ತಿದ್ದ ಮುತ್ತಿನಂತ ಹನಿಗ ಹೊಳೆವ ಬಲ್ಬಿನಂಗೆ ಕಾಂಬತಿದ್ದೊ.

ಕಲಾದೃಷ್ಟಿಂದ ನೋಡಿರೆ ಎಲ್ಲಾ ವಸ್ತುವೂ ಕಲಾತ್ಮಕವಾಗಿ ಕಂಡವೆತ ನಿನ್ನೆ ತಾನೆ ಹೇಳಿದ್ದ ಅಣ್ಣನ ಮಾತಿಗೆ ಅವ್ಳ ನಗಾಡಿತ್ತ್. ಆದರೆ ಇಂದ್ ನಿಜ ಅನ್ಸಿತ್. ಸೂಕ್ಷ್ಮವಾಗಿ ನೋಡಿರೆ ಪ್ರತಿಯೊಂದ್ ವಸ್ತುನ ಆ ದ್ಯಾವ್ರು ಕಲಾತ್ಮಕವಾಗಿಯೇ ಸೃಷ್ಟಿಸಿಟ್ಟು ಅನ್ಸಿದೆ. ಮಳೆಯ ರಭಸ ಜಾಸ್ತಿ ಆಗ್ತಾನೇ ಇತ್ತ್. ಹಂಚಿಂದ ಸುರಿಯುತ್ತಿದ್ದ ಧಾರೆ ವರುಣನ ತಾಳಕ್ಕೆ ತಕ್ಕಂಗೆ ಕೊಣ್ದಂಗೆ ಕಾಂಬತಿತ್ತ್. ಮಳೆ ಒಮ್ಮೆಗೆ ನಿಲ್ಲ್‌ಕನ ಪಡುವಲಿ ರವಿ ಇಣ್ಕಿತ್. ಅವನ ರಶ್ಮಿಗೆ ಹೊಳ್ದ ನೀರ್ ಹನಿ ಮೂಡಲಿ ಸಪ್ತ ರಾಗ ರಂಜಿತ ಕಮಾನ್‌ನ ರಚಿಸಿತ್. ರಮ್ಯ ತನಿಗೆ ಗೊತ್ತಿಲ್ಲದಂಗೆ ಭಾವ ತುಂಬಿ "ಅಮ್ಮಾ" ತೇಳ್ವ ಸ್ವರ ಹೊರ್ಟತ್. "ಎಂತ ರಮ್ಯಾ? ಕರ್ದ್ಯಾ?"ತೇಳಿ ಚೋಂದವ್ವ ಹೊರಗೆ ಬಂದೊ.

"ಅಲ್ಲಿ ನೋಡಮ್ಮ, ಎಷ್ಟ್ ಪೊರ್ಲು!"

"ಅಲ್ಲಿ ಎಂತ ಉಟ್ಟು ಕಾಮನಬಿಲ್ಲ್. ನೀನೆಂತಾ ಯಾಗೊಳು ಹಿಂಗೆ? ಶರೀರ ಬೇಳ್ದರು ಮನ್ಸ್ ಮಾತ್ರ ಕೂಸ್‌ನಂಗೆ. ಆ ಭಗವಂತ ಯಾಗ ಕಣ್ಣ್ ತೆರ್‍ದದೆನೊ ಏನೊ. ನಿನ್ನ ಸೌಭಾಗ್ಯದ ಬಾಗ್ಲ್ ಯಾಗ ತೆರ್‍ದದೆನೊ ಏನೊ"ತ ನಿಟ್ಟುಸಿರ್ ಬುಟ್ಟತ್.

"ಛೇ, ಇಂತ ರಸಗಳಿಗೆಲಿ ನಿನ್ನ ಪುರಾಣ ತೆಗ್ದ್ ರಸಭಂಗ ಮಾಡ್ ಬೇಡಮ್ಮ. ನಾನೇನಾರ ಕಲಾವಿದೆ ಆಗಿದ್ದರೆ, ಈ ಪೊರ್ಲುನ ಹಂಗೇ ಬುಡ್ಸಿ ಬುಡ್ತಿದ್ದೆ."

"ಒಳಗೆ ನಡಿ. ಮಳೆನೆಂದ್ ಮತ್ತೆ ಮಲ್ಗಿ ಬುಡ್‌ಬಾಡಾ. ನಿನ್ನ ತಲೆ ನೋಡ್, ಕೆದ್ರಿ ಹೋಗುಟ್ಟು. ಸರಿ ಮಾಡಿಕಂಡ್ ಬಂದ್ ತಿಂಡಿ ತಿನ್ನ್. ಲಾಯ್ಕ ಹಲ್ಸಿನ ಹಣ್ಣ್ ಇತ್ತ್. ಮಾಂಬಳ ತೆಗ್ದ್ ಕೂಗಲೆ ಹಿಟ್ಟ್ ಮಾಡೊಳೆ. ಮರ್ತೆಬುಟ್ಟಿದ್ದೆ ನೋಡ್. ಶಾಂತಿದ್ ಫೋನ್ ಬಂದಿತ್ತ್. ಈಗ ಬನ್ನೆತ ಹೇಳ್ತ್. ಅವ್ಳು ಬಂದ ಮ್ಯಾಲೆ ಇಬ್ಬರು ಒಟ್ಟಿಗೆ ತಿನ್ನಿ."

"ಸರಿ ಅಮ್ಮ. ಇಬ್ಬರು ಒಟ್ಟಿಗೆ ತಿಂದವೆ. ಸರಿಯಾ?".

"ಸರಿ ಬುಡ್". ಚೋಂದವ್ವ ಒಳಗೆ ನಡ್ದೊ.

ರಮ್ಯ ಹಾರಿಕಂಡ್ ಹಾರಿಕಂಡ್ ತನ್ನ ರೂಮಿಗೆ ಹೋಗಿ ಡ್ರೆಸ್ಸಿಂಗ್ ಟೇಬಲ್ ಮುಂದೆ ಕುದ್ದತ್. ತಲೆ ಬಾಚಿಕಂಡ್ ಮುಕಕ್ಕೆ ಕ್ರೀಮ್ ಹಾಕಿ ಹೊರಗೆ ಬಾಕನ ಕಾಲಿಂಗ್ ಬೆಲ್ ಆತ್. ಒಂದೇ ಹಾರಿಗೆ ಹೋಗಿ ಬಾಗ್ಲ್ ತೆಗ್ದರೆ ಎದುರಿಗೆ ಶಾಂತಿ ನಿಂತಿತ್ತ್.

ಅವ್ಳ ಕೈ ಹಿಡ್ದ್ ಎಳ್ಕಂಡ್ ಚೋಂದವ್ವ ಇದ್ದಲ್ಲಿಗೆ ಬಾತ್. ಅಲ್ಲೇ ಕುದ್ದ್ ಅವರ ಮಾತ್‌ನ ಹೊಳೆ ಹರಿಯಕ್ಕೆ ಶುರು ಆತ್. ಶಾಂತಿ ಆಗಾಗ ಅವ್ರ ಮನೆಗೆ ಬರ್ತಿದ್ರಂದ ಅವ್ಳಿಗೆ ಮನೇಲಿ ಎಲ್ಲರೊಟ್ಟಿಗೆ ಸಲಿಗೆ ಇತ್ತ್.

ರಮ್ಯ ಮತ್ತೆ ಶಾಂತಿನ ಮಾತ್‌ಕತೆ ಕಾದಂಬರಿ, ಸಿನಿಮಾ, ಫೇಸ್‌ಬುಕ್, ವಾಟ್ಸಪ್... ಹಿಂಗೆ ಎತ್ತೆತ್ತಲೋ ಸಾಗ್ತಿತ್ತ್. ಮಾತ್‌ನ ನಡುಲಿ ಸಮಯ ಜಾರ್‌ದೇ ಗೊತಾತ್ಲೆ. ಶಾಂತಿ ಹೊತ್ತಾತ್‌ತ ಹೊರ್ಟತ್.

ಅವಳ್ನ ಗೇಟಿಗೆ ಮುಟ್ಟ ಕಳ್ಸಿ ಬಾಕನ ಸಿನಿಮಾ ಹಾಡ್ ಹೇಳಿಕಂಡ್ ರತನ್ ಒಳಗೆ ಬಾತ್.

"ಏನಣ್ಣಾ ಬಾಳಾ ಕುಶಿಲಿ ಇದ್ದಂಗೆ ಉಟ್ಟಲ್ಲ. ಎನಿ ಗುಡ್ ನ್ಯೂಸ್?"ತೇಳಿ ಕಣ್ಣ್ ಮಿಟುಕಿಸಿತ್.

ಬಾಳಾ ಸಮೆಂದ ಬೆಟ್ಟನೇ ತಲೆ ಮ್ಯಾಲೆ ಕಳ್ಚಿ ಬಿದ್ದಂಗೆ ಇರ್‍ತಿದ್ದ ಅಣ್ಣ, ಇಂದ್ ಕುಶಿಲಿ ಇರ್‍ದು ಕಂಡ್ ಅವ್ಳಿಗೆ ಕುಶಿ ಆತ್.

"ರಮ್ಯ, ಬಾ ಇಲ್ಲಿ. ಒಂದ್ ಸಮಾಚಾರ ಹೇಳ್ನೆ".

"ಬೇಗ ಹೇಳಪ್ಪ. ಒಳ್ಳೆ ದಿಗ್ವಿಜಯ ಮಾಡಿ ಬಂದಂಗೆ ಆಡಿಯಾ".

"ಹಂಗೇ ತಿಳ್ಕ. ಇಂದ್ ನಂಗೆ ಯುದ್ಧನ ಗೆದ್ದಷ್ಟ್ ಕುಶಿ ಆಗುಟ್ಟು."

"ಅದೆಂತಾ ಹೇಳಿಯಾ? ಇಲ್ಲೆ ನಾನ್ ಒಳಗೆ ಹೋನೆ ಈಗ".

"ಪ್ಲೀಸ್ನೆ ಹೇಳ್ನೆ. ನೋಡು ನಾಳೆ ಇಂಟರ್‌ವ್ಯೂ ಉಟ್ಟು ಗೊತ್ತಾತ!"

"ಏನಾರಾ ಆಗಲಿ. ನಿಂಗೆ ಈ ಸಲ ಕೆಲ್ಸ ಸಿಕ್ಕಿಬುಟ್ರೆ ನಂಗೆ ಭರ್ಜರಿ ಟ್ರೀಟ್ ಕೊಡಕು".

"ಅಯ್ಯೋ ಪೆದ್ದಿ! ಇಂಟರ್‌ವ್ಯೂ ನಂಗಲ್ಲ. ನಿಂಗೆ".

"ಅಂದರೆ..." ಎಂತದೊ ಹೇಳಿಕೆ ಹೊರ್‍ಟವಳ ಮುಕ ಬಾಡಿ ಹೋತ್.

"ಏನ್ ಅಣ್ಣ-ತಂಗೆದ್ ಗಲಾಟೆ ತಿಂಡಿ ತಿಂಬ ಗ್ಯಾನ ಉಟ್ಟ ಹೆಂಗೆ?"

"ಅಮ್ಮಾ, ನನ್ನ ಫ್ರೆಂಡ್ ಶೇಖರ್ ಉಟ್ಟಲ್ಲ. ಅವನ ಕಡೆಂದ ಯಾರೊ ನೆಂಟರ್‍ನ ರಮ್ಯನ ನೋಡಿಕೆ ಕರ್‍ಕಂಡ್ ಬನ್ನೀತ ಫೋನ್ ಮಾಡಿತ್. ನಾಳೆಗೆ ಎಲ್ಲಾ ರೆಡಿ ಮಾಡಿಕಮ್ಮ. ಹಂಗೆ ರಮ್ಯ ನೀನ್ ನಾಳೆ ಎಲ್ಲಿಗೂ ಹೋದು ಬ್ಯಾಡ."

"ನಾನಂತು ನಾಳೆ ಖಂಡಿತ ಇರ್‍ದುಲೆ. ನಾನೇನ್ ಪ್ರದರ್ಶನಕ್ಕೆ ಮಡ್ಗಿದ ಗೊಂಬೆನ? ವಿಷ್ಯ ತಿಳ್ದ್ ನನ್ನ ಯಾರೂ ಮದ್ವೆ ಮಾಡಿಕಂಬಲೆತ ತಿಳ್ದೂ ನನ್ನ ಯಾಕೆ ಹಿಂಸೆ ಮಾಡ್ರೆ? ನಾನ್ ಕಳ್ದ ಸಲನೇ ಹೇಳ್ಯೊಳೆ, ಇನ್ನ್ ಮುಂದೆ ಇದ್ದೆಲ್ಲ ಬ್ಯಾಡತ. ಇಂತ ಒಣ ಆಡಂಬರಕ್ಕೆಲ್ಲಾ ನಾನ್ ಕಳ್ದ ಸಲಕ್ಕೆ ಮುಕ್ತಾಯ ಹೇಳ್ಯೊಳೆ.

ಸಮಾಜದ ಮೌಢ್ಯಗಳಿಗೆ ಬಲಿಯಾಗಿ ಇನ್ನೊಬ್ಬನ ಆಶಾ ಸೌಧದ ಮ್ಯಾಲೆ ಮೂಢನಂಬಿಕೆನ ಕಟ್ಟ್‌ಪಾಡ್‌ಗಳ ಗೋರಿಕಟ್ಟಿ ಹೆದರ್‌ಪುಕ್ಲ ಆಗಿ ನೆಪಮಾತ್ರದ ಜೀವನ ನಡ್ಸುವ ಮನ್ಸ ವಿಧಿಬರಹ, ದೇವ್ರನ ಬಯ್ದದೆ.

ಆದರೆ ಇದೆಲ್ಲಾ ನರಮನ್ಸರ್ ಮಾಡಿಕಂಡ ಕಟ್ಟುಪಾಡ್‌ಗ. ನಾನ್ ನಿಮಿಗೆ ಭಾರ ಆಗಿದ್ರೆ ನಂಗೆ ವಿದ್ಯೆ ಉಟ್ಟು. ನನ್ನ ಕಾಲ್‌ಮ್ಯಾಲೆ ನಿತ್ತ್ ದುಡ್ದ್ ಬದ್ಕಿನೆ". ಸಿಡ್ಲ್ ಹೊಡ್ದಂಗೆ ಅವ್ಳ ಬಾಯಿಂದ ಮಾತ್‌ಗ ಹೊರ್‍ಟೊ. ಅಷ್ಟ್ ಹೇಳಿ ಅವ್ಳು ಸರಸರತ ತನ್ನ ಕೋಂಬರೆಗೆ ಹೊರ್‍ಟು ಹೋತ್.

ಒಂದ್ ಗಳಿಗೆ ಚೋಂದವ್ವ ಮತ್ತೆ ರನತ್‌ಗೆ ಶಾಕ್ ಹೊಡ್ದಂಗೆ ಆದರೂ ಅವು ತಕ್ಷಣ ಚೇತರಿಸಿಕಂಡೊ.

"ಯಾರಪ್ಪ ಬರ್‍ತಾ ಇರ್ದು? ಈ ಸಲನಾರ ಸರಿಯಾದೆನೊ ಏನೊ".

"ಅಮ್ಮ, ಏನಾರ ಆಗಲಿ. ಈ ಸಲ ಮಾತ್ರ ಅವ್ಕೆ ಮುಂದೆನೇ ಎಲ್ಲಾ ವಿಷ್ಯ ತಿಳ್ಸಿ ಬುಡೋಕು. ಎಲ್ಲ ಆಗಿ ಕಡೆಗೆ ಅವ್ಕೆ ತಿಳ್ದ್ ಬ್ಯಾಡತೇಳಿ ಬುಟ್ರೆ, ರಮ್ಯನ ಮನ್ಸಿಗೆ ಬಾಳಾ ಬ್ಯಾಜಾರಾದೆ".

"ಏನೋಪ್ಪಾ. ನನ್ನ ಹಣೆಬರಹನೇ ಸರಿ ಇಲ್ಲೆ. ಅಪ್ಪ ನೋಡ್ರೆ ಹಾಸಿಗೆ ಹಿಡ್ದೊಳೊ. ಇದ್ದೊಬ್ಬ ಮಗಳ ಸ್ಥಿತಿ ಹಿಂಗಾತ್. ಇನ್ನ್ ನೀನ್ ಒಬ್ಬ ಎಂತ ಮಾಡಿಯ".

"ಹಂಗ್ಯಾಕೆ ಬೇಜಾರ್ ಮಾಡಿಕಂಡಿಯಮ್ಮ. ಆ ದೇವ್ರು ಕಣ್ಣ್ ಬುಟ್ರೆ ಎಲ್ಲಾ ಸರಿಯಾದೆ ಬುಡ್. ಅಪ್ಪ ಈಗ ಮುಂದೆಗಿಂತ ಪರ್ವಾಗಿಲ್ಲ ಅಲ್ಲಾ? ದಿನ ಕಳ್ದಂಗೆ ಸರಿಯಾದವೆತ ಡಾಕ್ಟರ್ ಹೇಳಿಯೊಳಲ್ಲ. ಇನ್ನ್ ರಮ್ಯನ ವಿಷ್ಯಲಿ ನೀನ್ ಎಂತಾರ ಮಾತಾಡಿ ಅವ್ಳ ಮನ್ಸ್ ಕೆಡ್ಸ್‌ಬ್ಯಾಡ. ಇದ್ರಲ್ಲಿ ಅವ್ಳ ತಪ್ಪು ಎಂತ ಉಟ್ಟು? ಮೂಲ ನಕ್ಷತ್ರಲಿ ಹುಟ್ಟೋಕುತ ಅವ್ಳೇನಾರಾ ಕೇಳಿಕಂಡಿತ್ತಾ? ಅಲ್ಲಾ ನೀನೇನಾರ ಹರ್ಕೆ ಮಾಡಿಕಂಡಿದ್ದಾ? ಎಂತಸ ಗ್ಯಾನ ಮಾಡ್ಬಡಮ್ಮ. ಈ ಸಲ ನನ್ನ ಫ್ರೆಂಡ್ ಶೇಖರ್‌ನ ಸೆಲೆಕ್ಷನ್.

ಅವಂಗೆ ಹಿಂದೆನೆ ವಿಷ್ಯ ಎಲ್ಲ ತಿಳ್ಸಿವಳೆ. ಅವಂಗೆ ಯಾರಾರ ಇದ್ದರೆ ಹೇಳ್‌ತ ಹೇಳಿದ್ದೆ. ಅದ್ಕೆ ಅಂವ ಅವನ ಕಡೆ ನೆಂಟರನ್ನ ಕರ್ಕಂಡ್ ಬನ್ನೆತ ಫೋನ್ ಮಾಡುಟ್ಟು."

"ಸರೀಪಾ" ತೇಳಿ ಮುತ್ತಣ್ಣನವ್ಕೆ ವಿಷಯ ತಿಳ್ಸಿಕೆ ಹೋದೊ ಚೋಂದವ್ವ. ಮುತ್ತಣ್ಣನವ್ಕೆ ಪಾರ್ಶ್ವವಾಯು ಆಗಿ ಹಾಸಿಗೆ ಹಿಡ್ದಿದ್ದೊ.

ಕೋಂಬರೆ ಸೇರ್ದ ರಮ್ಯ ಸುಮ್ಮನೆ ಕುದ್ದ್ ಬುಡ್ತ್. ಅವ್ಳ ಮನ್ಸ್‌ಲಿ ಯೋಚನೆಗಳ ಮಹಾಪೂರವೇ ಹರಿಯತಿತ್ತ್. ಇದ್ಕೆ ಮುಂದೆ ಸುಮಾರ್ ದಪ ನಡ್ದ ಘಟನೆಗ ಅವ್ಳ ಮನ್ಸ್‌ಲಿ ಮೂಡಿಬಂದೊ.

ಒಮ್ಮೆ ರಮ್ಯಂಗೆ ಒಂದ್ ನೆಂಟಸ್ತನ ಬಂದಿತ್ತ್. ಮಾತ್ಕತೆ ಮುಗ್ದ್ ಇನ್ನ್ ಹತ್ತ್ ದಿನಲಿ ಲಗ್ನಪತ್ರಿಕೆಗೆ ಬನ್ನೆತೇಳಿ ಹೋದವು ಎರ್ಡೇ ದಿನಲಿ ಫೋನ್ ಮಾಡಿ, ಬಾಯಿಗೆ ಬಂದಂಗೆ ಮಾತಾಡಿದ್ದೊ. ಮೂಲ ನಕ್ಷತ್ರದ ಮಗಳ್ನ ತಮ್ಮ ಕೊರಳಿಗೆ ಕಟ್ಟಿಕೆ ಹೊರ್ಟ ವಂಚಕರ್‌ತೇಳಿ ಎಲ್ಲರ ಎದೆಗೆ ಬರೆ ಹಾಕಿದ್ದೊ. ಅದ್ಕೆ

ಮುಟ್ಟ ಇಂತಹ ಮೂಢನಂಬಿಕೆಗಳ್ನ ನಂಬದೆ ಇದ್ದ ಇವ್ಕೆ ಮೂಲ ನಕ್ಷತ್ರಲಿ ಹುಟ್ಟುದು ಒಂದು ಅಪರಾಧತ ತಿಳ್ದಿತ್ಲೆ. ಆಧುನಿಕ ಯುಗಲಿ ಇಂತ ವರ್ತಮಾನ ಆಶ್ಚರ್ಯ ತರ್ಲಿತ್ತ್. ಮತ್ತೆ ಒಂದೆರಡ್ ಕಡೆಂದನೂ ಇಂತದೇ ಉತ್ತರ ಬಂದಿತ್ತ್.

ಜಗತ್ತ್ ಎಷ್ಟ್ ಮುಂದುವರ್ದರೂ ಇಂತ ಕಂದಾಚಾರಗಳ್ನ ಅಷ್ಟು ಸುಲಭಲಿ ಬದಲಾಯಿಸಿಕೆ ಸಾಧ್ಯ ಇಲ್ಲೆ. ಎಲ್ಲವ್ಕೂ ತಮ್ಮ ಭವಿಷ್ಯದ ಬಗ್ಗೆ ಒಂದು ಚಿಂತೆ ಇದ್ದೇ ಇದ್ದದೆ.

ರಮ್ಯನ ಮನ್ಸ್‌ಲಿ ನಿರ್ವಿಕಾರ, ಭಾವರಹಿತ ಮನೋಭಾವ ತಾನೇ ತಾನಾಗಿ ಬೆಳ್ದ್ ಬಂದಿತ್ತ್. ಅವ್ಳಿಗೆ ತಟ್ಟನೆ ಎಂತದೊ ಗ್ಯಾನ ಆಗಿ ಅವ್ಳು ತಲೆ ಎತ್ತಿ ಎದುರಿಗೆ ಇದ್ದ ಕನ್ನಡಿಲಿ ತನ್ನ ಪ್ರತಿಬಿಂಬನ ನೋಡಿಕಣ್ತ್. ಇಷ್ಟ್ ದಿನ ಎಲ್ಲವೂ ನೀನ್ ಬಾಳ ಲಾಯ್ಕವಳಾತ ಹೇಳ್ತ್ ಇದ್ದೊ. ಇಂದ್ ಕನ್ನಡಿನೂ ಅದೇ ಮಾತ್ ಹೇಳ್ತಾ ಉಟ್ಟುತ ಅನ್ಸಿತ್.

ಆದರೆ, ಪಾರ್ಶ್ವವಾಯುಂದ ಹಾಸಿಗೆ ಹಿಡ್ದಿರ್‍ವ ಅಪ್ಪ, ಪ್ರೀತಿನ ಅಮ್ಮ, ಅಕ್ಕರೆಯ ಅಣ್ಣ-ಇವೆರೆಲ್ಲರ ನಿಟ್ಟುಸಿರಿಗೆ ಕಾರಣವಾದವ್ಳು ತಾನ್‌ತ ಗ್ಯಾನ ಮಾಡಿ ಎರ್ಡ್ ಹನಿ ಕಣ್ಣೀರ್ ಉದುರ್ತ್. ಎದ್ದ್ ಅಪ್ಪನ ಕೋಂಬರೆಗೆ ಹೊರ್ಟತ್.

ಆಗಲೇ ಚೋಂದವ್ವಂದ ವಿಷ್ಯ ತಿಳ್ದಿದ್ದ ಮುತ್ತಣ್ಣನವ್ರ ಮುಖಲಿ ಸಂತೋಷ ಕಾಂಬತಿತ್ತ್. ರಮ್ಯ ಅಪ್ಪನ ಹತ್ರ ಕುದ್ದ್ ಮಾತಾಡಿಕೆ ಸುರು ಮಾಡ್ತ್. ಚೋಂದವ್ವನವು ತಿಂಡಿ ಕಾಫಿನ ಅಲ್ಲಿಗೆ ತಕಂಡ್ ಬಂದೊ. ಅಷ್ಟೊತ್ತಿಗೆ ರತನ್‌ಸ ಅಲ್ಲಿಗೆ ಬಾತ್.

ರಮ್ಯನ ಬುಟ್ಟ್ ಎಲ್ಲವೂ ಕುಶೀಲಿ ಮಾತಾಡ್ದೊ. ಆದರೂ ಎಲ್ಲರ ಮನಸ್ ದೇವರಿಗೆ ಮೊರೆಯಿಡ್ತಿತ್ತ್. ರಮ್ಯನ ಮನ್ಸ್ ನಿರ್ಲಿಪ್ತ ಆಗಿತ್ತ್.

ಇವೆಲ್ಲಾ 'ಮದುವೆ'ತೇಳ್ವ ಮೂರಕ್ಷರಕ್ಕಾಗಿ. ಯಾಕೆ ಇಷ್ಟೊಂದು ಮಹತ್ವ ಕೊಟ್ಟವೆತ ಅರ್ಥ ಆತ್ಲೆ. ಒಂದ್ ಹೆಣ್ಣಿನ ಸ್ವಾತಂತ್ರ್ಯನ ಕಿತ್ತ್‌ಕಂಡ್ ದಾಸ್ಯದ ಸಂಕೋಲೆಂದ ಬಿಗಿವ ಈ ಕಾರ್ಯ ಅನಿವಾರ್ಯವಾ? ಅದೊಂದೇ ಬಾಳ್ನ ಗುರಿಯಾ? ಮದುವೆಂದ ಎಲ್ಲಾರ ಬಾಳ್ ಸುಖಮಯವಾದೆನಾ?

ಯೋಚನೆ ಮಾಡಿದಷ್ಟ್ ಪರಿಹಾರ ಸಿಕ್ಕದಾತ್. ಆದರೆ ತನ್ನ ರಕ್ಷಣೆ, ಒಳಿತ್-ಕೆಡಕ್, ನೋವು-ನಲಿವುಲಿ ಸಹ ಭಾಗಿಯಾಗುವಂತೆ ಒಬ್ಬ ಹೃಯದವಂತನ ಪ್ರೇಮ, ಆಶ್ರಯ ಅನಿವಾರ್ಯ ಅನ್ಸಿತ್. "ಎಂತನೇ ಗ್ಯಾನ ಮಾಡಿಯಾ? ವಿಷ್ ಯು ಬೆಸ್ಟ್ ಆಫ್ ಲಕ್!"ತೇಳಿ ದವಡೆಗೆ ಜಿಂಟಿ ರತನ್ ಹೊರಗೆ ಹೋತ್. ತಿಂಡಿ ತಿಂದ ತಟ್ಟೆಗಳ್ನ ತಕಂಡ್ ಚೋಂದವ್ವ ಅಡಿಗೆ ಮನೆಗೆ ಹೋದೊ.

ಫ್ರೆಂಡ್ ಮನೆಗೆ ಹೊರ್ಟಿದ್ದ ರಮ್ಯನ ನಿಲ್ಸಿಕಂಬಕೆ ಚೋಂದವ್ವ ಮತ್ತೆ ರತನ್‌ಗೆ ಸಾಕ್ ಸಾಕಾತ್. ಅಷ್ಟೊತ್ತಿಗೆ ಮನೆ ಮುಂದೆ ಕಾರ್ ನಿತ್ತ ಸದ್ದ್ ಕೇಳಿ ರತನ್ ಗೇಟ್ ಕಡೆಗೆ ಓಡ್ತ್.

ಶೇಖರ್ ಕಾರ್‌ಂದ ಇಳ್ದ್ ತನ್ನ ಅಪ್ಪ, ಅವ್ವ ಮತ್ತೆ ರಮ್ಯನ ನೋಡಿಕೆ ಬಂದ ಹೈದ, ಅವ್ನ ಅಪ್ಪ, ಅವ್ವನ ಇಳ್ಸಿಕಣ್ತ್. ರತನ್ ಎಲ್ಲಾರ್ನ ಸ್ವಾಗತ ಮಾಡಿ ಒಳಗೆ ಕರ್ಕಂಡ್ ಬಾತ್. ಚೋಂದವ್ವ ನೀರು, ಟವಲು ಕೊಟ್ಟು ಮಾತಾಡ್ಸಿದ್ದೊ. ಭಾವನೆ ಇಲ್ಲದ ಮುಖ ಹೊತ್ತ್‌ಕಂಡ್ ರಮ್ಯ ಎಲ್ಲವ್ರ ಕಾಲ್ ಹಿಡ್ದ್ ಒಳಗೆ ಹೋತ್.

ಕಾಫಿ, ತಿಂಡಿ ಆದ ಮ್ಯಾಲೆ ಎಲ್ಲವೂ ಮುತ್ತಣ್ಣನವ್ರ ರೂಮ್‌ಲೇ ಮಾತಿಗೆ ಕುದ್ದೊ. ರಮ್ಯ ಎಲ್ಲವ್ಕ ಒಪ್ಪಿಗೆ ಆತ್. ಮತ್ತೆ ಮದ್ವೆ ಲೆಕ್ಕಚಾರದ ಮಾತ್ ಬರ್ತಿದ್ದ ಹಂಗೆ ರತನ್, ಶೇಖರ್‌ನ ಕಡೆ ತಿರ್ಗಿ ವಿಷ್ಯ ತಿಳ್ಸಿವಳಾತೇಳುವಂಗೆ ಕಣ್ಣ್ ಮಿಟುಕಿಸಿತ್.

ಶೇಖರ್ 'ನೀನ್ ಹೇಳಿ ಬುಡ್'ತ ಸನ್ನೆ ಮಾಡ್ತ್.

ಚೋಂದವ್ವ ಮತ್ತೆ ಮುತ್ತಣ್ಣನವ್ರ ಎದೆ ಹೊಡ್ಕಣಿಕೆ ಶುರ್ ಆತ್.

ಕಡೇಲಿ ಶೇಖರ್, ರಮ್ಯನ ವಿಷ್ಯ ಹೇಳ್ಕನ ಎಲ್ಲವೂ ಹಾವು ಮೆಟ್ಟಿದಂಗೆ ಬೆಚ್ಚಿಬಿದ್ದೊ. ಚೋಂದವ್ವ, ರತನ್ ತಲೆ ತಗ್ಸಿದೊ.

"ನಮ್‌ಗ್ಯಾಕೆ ಹೇಳ್ತ್‌ಲೆ"ತ ಶೇಖರ್‌ನ ಅಪ್ಪ-ಅವ್ವ ಅಸಮಾಧಾನಲಿ ಹೇಳ್ದೊ. "ಇದ್ಕಾಗಿ ಇಷ್ಟು ದೂರ ಬಾಕಾಯ್ತುಲ"ತೇಳ್ವಂಗೆ ಎಲ್ಲರ ಮಾತಿನ ಧಾಟಿ ಬದಲಾತ್. ಮುಖಲಿ ನಗೆ ಬರ್ಸಿಕಂಡ್ ಅದ್-ಇದ್ ಮಾತಾಡಿ ಹೊರ್ಡುವ ಆತುರ ತೋರ್‌ಸ್ತಿದ್ದೊ. ಯಾರು ಬಲತ್ಕಾರ ಮಾಡ್ತ್‌ಲೆ.

ಹೊಸ ನೆಂಟರೊಟ್ಟಿಗೆ ಶೇಖರ್ ಮತ್ತೆ ಮನೆಯವು ಹೊರ್ಟು ನಿತ್ತೊ. ಗೆಳೆಯತೇಳ್ವ ಅಭಿಮಾನಂದ ರತನ್ ಶೇಖರ್‌ಗೆ ನಾಳೆ ಹೋಗುತ ಬಲತ್ಕಾರ ಮಾಡ್ತ್. ಒಳಗೆಂದ ಬಂದ ರಮ್ಯ ಸ ಶೇಖರ್‌ನ ಅಮ್ಮನೊಟ್ಟಿಗೆ ಇಂದ್ ಇದ್ದ್ ಹೋಗಿತ ಬಾಳ ಕೇಳಿಕಣ್ತ್.

ಅವಳ ಸೌಜನ್ಯಪೂರ್ಣ ಮಾತ್, ನಡತೆ ಅವ್ಕ ಪೊರ್ಲುಗೆ ಅವು ಮಾರು ಹೋದೊ. ಶೇಖರಂಗೆ ಬಾಳ ಬೇಜಾರಾತ್. ಆದರು ಬಂದವು ತಪ್ಪು ತಿಳ್ಕಂಡ್ ಬುಡುವೋತೇಳಿ ಹೊರ್ಟು ಹೋದೊ.

ಮನೇಲಿ ಸದ್ದೆ ಇಲ್ಲದೆ ನಿಶಬ್ದ ಆತ್. ರತನ್ ಗೇಟ್‌ವರೆಗೆ ಹೋಗಿ

ಎಲ್ಲಾರ್ನ ಕಳ್ಸಿಬಾತ್. ಸಾಯಂಕಾಲ ನಾಕ್ ಗಂಟೆ ಆಗಿತ್ತ್. ರತನ್ ಹೊರಗೆ ಹೋಗಿ ಬನ್ನೆತ ಹೋತ್. ರಮ್ಯ ಪೀಡೆ ಕಳ್ತ್‌ತೇಳುವಂಗೆ ಸ್ವಲ್ಪ ಸಿಂಗಾರ ಮಾಡಿಕಂಡ್ ಫ್ರೆಂಡ್ ಮನೆಗೆ ಹೊರ್ಟತ್. ಬೆಳ್ಗೆಂದ ಮನ್ಸಿಗೆ ಬಾರಿ ಮುಜುಗರ ಆಗಿದ್ರಂದ ಅವ್ಳಿಗೆ ಬದಲಾವಣೆನ ಅವಶ್ಯಕತೆ ಇತ್ತ್.

ರತನ್, ರಮ್ಯ ವಾಪಾಸ್ ಬಾಕನ ಗಂಟೆ ಆರಾಗಿತ್ತ್. ಮನೆ ಮುಂದೆ ಕಾರ್ ನಿಂತಿತ್ತ್. ನಿಶಬ್ದ ಇರಕಾಗಿದ್ದ ಮನೆಲಿ ಮಾತ್ ಕೇಳ್ಕನ ಇಬ್ಬರಿಗೂ ಆಶ್ಚರ್ಯ ಆತ್. ನೋಡಿರೆ ಶೇಖರ್ ಮತ್ತೆ ಅವನ ಅಪ್ಪ-ಅವ್ವ ವಾಪಾಸ್ ಬಂದಿದ್ದೊ.

"ಅರೆ ಶೇಖರ್..."ತೇಳ್ತ್ ರತನ್ ಆಶ್ಚರ್ಯಲಿ.

"ಹೌದಪ್ಪ. ಯಾಕೋ ನಿಮ್ಮ ಪ್ರೀತಿನ ತಿರಸ್ಕರಿಸಿ ಆ ಹೆಣ್ಣು ಕೂಸ್‌ನ ಮನ್ಸಿಗೆ ಬ್ಯಾನೆ ಮಾಡಿ ಹೋಕೆ ಮನ್ಸೇ ಬಾತ್ಲೆ. ನೆಂಟ್ರನ್ನ ಬಸ್ಸ್ ಹತ್ತಿ ವಾಪಾಸ್ ಬಂದು ಬುಟ್ಟೊ"ತೇಳ್ದೊ ಶೇಖರ್‌ನ ಅಪ್ಪ.

"ಒಳ್ಳೆದಾತ್ ಬುಡಿ"ತೇಳಿ ರತನ್ ಶೇಖರ್‌ನ ಎಳ್ಕಂಡ್ ತನ್ನ ರೂಮಿಗೆ ಹೋತ್.

ಎಲ್ಲವ್ಕು ಬಾಳಾ ಕುಶಿ ಆಗಿತ್ತ್. ಚೋಂದವ್ವ ಶೇಖರ್‌ನ ಅವ್ವನ ಕರ್ಕಂಡ್ ಅಡುಗೆ ಮನೆಗೆ ಹೋದೊ.

ಇಬ್ಬರು ಮಾತಾಡಿಕಂಡ್ ರಾತ್ರಿಗೆ ಅಡುಗೆ ಶುರು ಮಾಡ್ದೊ. ರಮ್ಯನು ಅವರೊಟ್ಟಿಗೆ ಸೇರಿಕಂಡ್ ಸಹಾಯ ಮಾಡ್ತ್. ಶೇಖರ್‌ನ ಅಪ್ಪ ರತನ್ ಅಪ್ಪನ ರೂಮಿಗೆ ಹೋಗಿ ತಮ್ಮ ವಯಸ್ಸಿಗೆ ಸಹಜವಾದ ಲೋಕರೂಢಿನ ಮಾತಾಡಿಕೆ ಶುರು ಮಾಡ್ದೊ.

ಚೋಂದವ್ವ ರಾತ್ರಿ ಗದ್ದಳ ಊಟ ತಯಾರ್ ಮಾಡಿದ್ದೊ. ಹಂದಿಗೈಪು-ಕಡಂಬಿಟ್ಟ್, ಕೋಳಿಸಾರ್- ನೂಪಿಟ್ಟ್, ರೊಟ್ಟಿ, ಪಾಯಸ ಎಲ್ಲಾ ಗೌಜಿಲಿ ಉಂಡ್ ಮಾರನೆ ದಿನ ಎಲ್ಲವೂ ಹೊರ್ಟು ಹೋದೊ. ಸಂತೋಷಂದ ಇದ್ದ ಮನೆ ಮತ್ತೆ ಬಿಕೊತೇಳ್ತ್.

ಮತ್ತೆ ಎಲ್ಲವೂ ತಮ್ಮ ತಮ್ಮ ಕೆಲ್ಸಗಳಲಿ ತೊಡಗ್ಸಿಕೊಂಡೊ. ಮಾರನೆ ದಿನ ಶೇಖರ್‌ನ ಫೋನ್ ಬಾತ್.

"ರತನ್ ನಾವ್ ಮೊನ್ನೆ ವಾಪಾಸ್ ಬರದೆ ನಿಮ್ಮನೇಲಿ ಉಳ್ದದ್ ದೇವರ ಕೃಪೆ. ನಿಮ್ಮೊಟ್ಟಿಗೆ ಬಂದಿದ್ದ ನೆಂಟರ್ ಹೋದ ಬಸ್ಸ್, ಆಕ್ಸಿಡೆಂಟ್ ಆಗಿ ಎಲ್ಲಾ

ಆಸ್ಪತ್ರೆ ಸೇರಿವಳೊ. ಮತ್ತೆ ಒಂದ್ ಗುಡ್ ನ್ಯೂಸ್! ನಾವ್ ವಾಪಾಸ್ ಬಾಕನ ನನ್ನ ಅಪಾಯಿಂಟ್‌ಮೆಂಟ್ ಆರ್ಡರ್ ಬಂದಿತ್ತ್. ನಂಗೆ ಬ್ಯಾಂಕ್‌ಲಿ ಕೆಲ್ಸ ಸಿಕ್ಕುಟ್ಟು."

"ತುಂಬಾ ಸಂತೋಷ ಶೇಖರ್".

"ಇದಕ್ಕೆಲ್ಲಾ ಎಂತ ಕಾರಣಗೊತ್ತಾ?"

"ಇಲ್ಲೆ... ಹೇಳಪ್ಪ.."

"ಅಪ್ಪ, ಅವ್ವ ಎಲ್ಲಾ ಹೇಳ್ತಾವಳೊ. ಇದ್ ರಮ್ಯನ ಮೂಲ ನಕ್ಷತ್ರದ ಪ್ರಭಾವತ. ಅಪರಾಧಕ್ಕೆ ತಕ್ಕ ಶಿಕ್ಷೆಗೆ ಅವ್ಳಿಗೆ ಆಕು ಅಲ್ಲಾ. ಅದ್ಕೆ ರಮ್ಯಂಗೆ ಒಂದು ಪನಿಶ್‌ಮೆಂಟ್ ಕೊಡಕುತ ತೀರ್ಮಾನ ಮಾಡಿವಳೊ."

"ಅದೆಂತಪ್ಪಾ" ಗಾಬರಿಲಿ ರತನ್ ಕೇಳ್ತ್.

"ಹೇಯ್ ಗಾಬರಿ ಆಗ್‌ಬ್ಯಾಡ. ರಮ್ಯನ ಆದಷ್ಟ್ ಬ್ಯಾಗ ನಮ್ಮ ಮನೆಗೆ ಸೇರ್ಸಕುತ ತೀರ್ಮಾನ ಮಾಡಿವಳೊ."

ಶೇಖರ್‌ನ ಮಾತ್ ಕೇಳಿ ರತನ್‌ನ ಕಣ್ಣಲ್ಲಿ ನೀರ್ ಬಾತ್.

"ನೀನ್ ತಮಾಸೆ ಮಾಡ್ತಾ ಇಲ್ಲೆ ತಾನೆ?"

"ಇದ್ರಲ್ಲಿ ತಮಾಸೆ ಮಾಡ್ದು ಎಂತ? ಅಪ್ಪ ನಿಮ್ಮ ಅಪ್ಪನೊಟ್ಟಿಗೆ ಮಾತಾಡ್ವೇತ ಹೇಳಿವಳೊ".

"ಶೇಖರ್, ನೀನ್ ರಿಯಲಿ ಗ್ರೇಟ್."

"ಸರಿಯಪ್ಪಾ. ರಮ್ಯನ ಅಭಿಪ್ರಾಯ ತಿಳ್ದ್ ಫೋನ್ ಮಾಡ್".

ರತನ್ ಕುಶಿಲಿ ಅಪ್ಪ ಅವ್ವಂಗೆ ವಿಷ್ಯ ತಿಳ್ಸಿಕೆ ಒಳಗೆ ಓಡ್ತ್. ಶೇಖರ್ ಮತ್ತೆ ಅವನ ಅಪ್ಪ ಅವ್ವನ ದೊಡ್ಡ ಮನ್ಸ್‌ನ ಗ್ಯಾನ ಮಾಡಿ ಎಲ್ಲವೂ ಮೂಕರಾದೊ. ರತನ್‌ಗೆ ತನ್ನ ಗೆಳೆತನ ಸಾರ್ಥಕ ಆತ್‌ತ ಅನ್ಸಿತ್. ಒಂದ್ ಮನೆಲಿ ಬೆಳಕ್ ಹೊತ್ತಿಸಿದ ದೇವರಂತವುಕ್ಕೆ ಎಲ್ಲವೂ ಮನಸ್ಸ್‌ಲೇ ವಂದಿಸಿದೊ. ರಮ್ಯನ ಮುಖ ಕುಶಿಲಿ ಅರಳಿದ ತಾವರೆನಂಗೆ ಆಗಿತ್. ಶೇಖರ್ ಮೂಢನಂಬಿಕೆಗೆ ಸವಾಲಾಗಿ ನಿಲ್ಲುವ ಪ್ರಯತ್ನ ಮಾಡಿತ್ತ್.

* * * * *

## ಅನುಬಂಧ

**ಬಸ್ಸ್‌ಲಿ** ಸೀಟಿಗೆ ವರ್‌ಗಿ ಕುದ್ದ ರಶ್ಮಿಗೆ ತೂಕಡಿಕೆ ಬಾಕೆ ಸುರು ಆತ್. ಆದರೆ ಏನ್ ಮಾಡ್ದು ಅವ್ಳು ಒಂದು ಗಳಿಗೆ ಕಣ್ಣ್ ಮುಚ್ಚ್‌ಕನ ಬಸ್ಸ್ ಕಿರ್...ತ ಸದ್ದ್ ಮಾಡಿ ದಡಕ್‌ತ್ ನಿಲ್ಲ್‌ತಿತ್ತ್. ಈ ಹಾಳ್ ಸೆಟ್ಲ್ ಬಸ್ಸ್ ಹಿಂಗೆತ ಮನಸ್‌ಲೇ ಬೈಕಂಡತ್. ಒಂದ್ ಕಡೆ ಕುದ್ದ ಸೀಟ್ ಒತ್ತ್‌ತಿತ್ತ್. ಹಿಂಗಾಗಿ ಅವ್ಳಿಗೆ ಬಾತಿದ್ದ ನಿದ್ದೆ ದೂರ ಓಡ್‌ತಿತ್ತ್. ಆಗ ಅವ್ಳಿಗೆ ಆತಿತ್ತ್ ನಮ್ಮ ಸರ್ಕಾರ ಈ ಬಸ್ ಒಂದೇತಾ. ಆ ಹರ್‌ಕ್‌ಲ್ ಚೇರಿ ಸೀಟ್, ಆ ಬಸ್ಸ್‌ಲಿದ್ದ ಜನ ಸ್ವಂತ ಬಸ್ಸ್‌ನಂಗೆ ಕಾಲು ನೀಂಡಿ ಕುದ್ದ್‌ಕಂಡ್ ಬೀಡಿ ಎಳೆಯದು, ಹೆಂಗಸ್‌ಗ ಎಲೆ ಅಡಿಕೆ ತಿಂದು ಅಲ್ಲೇ ಕರೇಲಿ ಉಗಿಯದು, ಮಕ್ಕ ಎಲ್ಲಾ ಅಲ್ಲೆ ಗಲೀಜು ಮಾಡುದು, ಅದ್‌ಕೆ ಸರಿಯಾಗಿ ಆ ಬಸ್ಸ್‌ನ ಕಿವಿಚಂಡೆ ವಡ್ದು ಹೋಗ್ವಂತ ಸಂಗಿತ (ಸದ್ದ್). ಬ್ಯಾಡ ಇಂತ ಸರಕಾರಿ ಬಸ್ಸ್‌ಲಿ ಒಂದು ದಿನ ಇಡೀ ಕುದ್ದರೆ ಅದೂ ಮೈಸೂರು ಕಡೆ ನೀವೇ ಗ್ಯಾನ ಮಾಡಕು. ಆದರೆ ಏನ್ ಮಾಡ್ದು, ನಾನ್ ಅರ್ಜೆಂಟ್‌ಲಿ ಸಿಕ್ಕಿದ ಬಸ್ಸ್ ಹತ್ತಿ ಕುದ್ದಾಗಿತ್ತ್, ಇನ್ನು ಅನುಭವ್ವುದೊಂದೆ ಬಾಕಿ.

ಬೆಳಿಗ್ಗೆ ಮನೆಂದ ಅಪ್ಪ ಕೂಡಲೇ ಹೊರ್ಟ್ರ್ ಬಾತ ಫೋನ್ ಮಾಡಿ ಎಲ್ಲಾ ಬಂದ ಮೇಲೆ ಹೇಳ್ನೆತ ಹೇಳ್ಕನ ಹಂಗೇ ತಮ್ಮ ನವೀನ್ ಕೈಲಿ ಆಫೀಸಿಗೆ ಕೊಟ್ಟು ಬಾಂತ ಒಂದು ವಾರಕ್ಕೆ ರಜೆ ಬರ್ದ್ದು ಬೆಂಗ್ಳೂರ್‌ಂದ ಮಡಿಕೇರಿಗೆ ಹೊರ್ಟಾಗಿತ್ತ್. ಅಪ್ಪ ಯಾಕೆ ಫೋನ್ ಮಾಡಿರ್ದ್ರ್, ಅವ್ವಂಗೇನಾರು ಹುಷಾರಿಲ್ಲದೆ ಆತೇನೋತಾ ಜೀವ ಹೊಡ್ಕಣಿಕೆ ಸುರಾತ್, ಅಂತು ಯಾರಿಗೂ ಏನು ಆದು ಬೇಡಾತ ದೇವರ್ನ ಮನ್‌ಸ್‌ಲೇ ಗ್ಯಾನ ಮಾಡಿಕಂಡ್ ಹೊರ್ಟ್ ಬಂದಾಗಿತ್ತ್. ಯಾಕೋ ಮನ್‌ಸ್ಸೇ ಸರಿ ಇಲ್ಲದೆ ಏನೇನೋ ಗ್ಯಾನ ಬಾಕೆ ಸುರು ಆತ್. ಮನ್‌ಸ್ ಹಿಂದಕ್ಕೆ ಓಡ್ತ್.

* * * * *

ನಮ್ಮ ಮನೆಂದ ಮಡಿಕೇರಿಗೆ ಮೂರು ನಾಕ್ ಮೈಲು ದೂರ ಇತ್ತ್. ನಾನು ಮಡಿಕೇರಿಲೇ ಪಿ.ಯು.ಸಿ. ಮುಟ್ಟ ಓದಿದೆ. ನನ್ನ ಅಪ್ಪಂಗೆ ನಾನ್, ನನ್ನ ಅಕ್ಕ ಮತ್ತೆ ನನ್ನ ತಮ್ಮ ಹಿಂಗೆ ಮೂರು ಮಕ್ಕ. ಅಕ್ಕನ ಮದ್ವೆ ಆಗಿತ್ತ್. ನಾನ್‌ತೇಳ್‌ರೆ ಅಪ್ಪ ಅವ್ವಂಗೆ ಭಾರಿ ಕುಶಿ. ನನ್ನ ಬಾಳ ಪ್ರೀತಿಲೇ ಸಾಕಿದೋ. ನಾನು ಸ್ಕೂಲಿಗೆ ರಜ ಬಿಡ್ಕನ್ನೆಲ್ಲಾ ನನ್ನ ಅತ್ತೆಗೆ ಮನೆಗೆ ಹೋತಿದ್ದೆ. ಅತ್ತೆತೇಳ್‌ರೆ ನನ್ನ ಅಪ್ಪನ ತಂಗೆ. ಅತ್ತೆಗೆ ಸಹ ನಾನುತೇಳ್‌ರೆ ಬಹಳ ಇಷ್ಟ. ಯಾಕೆತೇಳ್‌ರೆ ನನ್ನ ಅತ್ತೆಗೆ ಹೆಣ್ಣು ಮಕ್ಕ ಇತ್ತ್‌ಲೆ, ಅತ್ತೆ ಇದ್ದವು ಇಬ್ಬರು ಗಂಡು ಮಕ್ಕ. ದೊಡ್ಡಂವ ರಘು ನನ್ನಕ್ಕಿಂತ ಏಳೆಂಟ್ ವರ್ಷಕ್ಕೆ ದೊಡ್ಡಂವ. ಎರಡನೆಯವ ರವಿ, ನಂಗೆ 2 ವರ್ಷಕ್ಕೆ ದೊಡ್ಡಂವ. ನಂಗು ರವಿಗೂ ಸಾಧಾರಣ ವಯಸ್‌ಲಿ ವ್ಯತ್ಯಾಸ ಇತ್ತ್‌ಲೆ, ಆದಂರ್ದ ನಾವಿಬ್ಬರೂ ಯಾಗಲೂ ಜೊತೆ ಜೊತೆಯಾಗೇ ಆಟ ಆಡ್ದು, ಓದುದು ಮಾಡ್‌ತಿದ್ದೊ, ರವಿ ಮತ್ತೆ ನಾನು ಸ್ಕೂಲಿಗೆ ರಜ ಸಿಕ್ಕ್‌ಕನ ಒಂದು ರಜಲಿ ಅಂವ ನಮ್ಮಲ್ಲಿಗೆ ಬಾದು, ಇನ್ನೊಂದು ರಜಲಿ ನಾನು ಅವರ ಮನೆಗೆ ಹೋದು, ಹಿಂಗೇ ಮಾಡ್‌ತ್ತಿದ್ದೋ. ಹಿಂಗಾಗಿ ನಮ್ಮ ಇಬ್ಬರ್ನ ಎಲ್ಲವೂ ಇವ್ಕೆ ಮದುವೆ ಮಾಡಕೂತೇಳಿ ತಮಾಷೆ ಮಾಡ್‌ತ್ತಿದ್ದೊ. ನಾವು ಸಣ್ಣದಿರ್‌ಕನ ಹಂಗೆತೇಳ್ರೆ ಅವರೊಟ್ಟಿಗೆ ಜಗಳ ಮಾಡ್ತಿದ್ದೊ.

ಆದರೆ ನಾವು ದೊಡ್ಡವಾದಂಗೇ ನಮ್ಮ ಮನ್ಸ್‌ಲೇ ಅಂತ ಭಾವನೆ ಬಾಕೆ ಸುರು ಆತ್. ನಾವಿಬ್ಬರು ನಿಜವಾಗೂ ಮದುವೆಯಾಗವೂತ ತಿಳ್ಕಂಡಿದ್ದೋ.

ಇದ್ಕೆ ನಮ್ಮ ಮನೆಲೂ ರವಿ ಮನೆಲೂ ಪ್ರೋತ್ಸಾಹ ಕೊಡುತ್ತಿದ್ದೋ,

ಹಂಗಾಗಿ ನಾವು ಬೆಳ್ದಂಗೆಲ್ಲಾ ನಮ್ಮ ಸ್ನೇಹಸಹಾ ಬೆಳ್ಕಂಡೇ ಹೋತು.

ರವಿ ನನ್ನಕ್ಕಿಂತ ಎರಡು ವರ್ಷ ದೊಡ್ಡವಾದ್ರಂದ ಅಂವ ನನ್ನಕ್ಕಿಂತ ಎರ್ಡುರ್ಷ ಕ್ಲಾಸ್ ಮುಂದೆ ಇತ್ತ್. ನಾನ್ ಪಿ.ಯು.ಸಿಗೆ ಬಾಕನ ರವಿ ಬಿ.ಕಾಂ.ಗೆ ಸೇರ್ತ್. ಅಂವ ಮಂಗಳೂರು ಕಾಲೇಜಿಗೆ ಸೇರ್‌ದ್ರಂದ ನಮ್ಗೆ ಮುಂದೆನಂಗೆ ಒಟ್ಟಿಗೆ ಸೇರಿಕೆ ಆತಿತ್ತ್‌ಲೆತ ನಾವು ಫೋನ್ ಮಾಡಿಕೆ ಸುರು ಮಾಡ್ದೊ.

ನಾನು ಪಿ.ಯು.ಸಿ.ಲಿ ಪಾಸಾಗದೇ ಕಂಪ್ಯೂಟರ್ ಕ್ಲಾಸಿಗೆ ಹೋಕಂಡ್ ಪರೀಕ್ಷೆಗೆ ಓದ್‌ತ್ತಿದ್ದೆ, ರವಿ ಈಗ ಫೈನಲ್ ಬಿ. ಕಾಂಲಿ ಇತ್ತ್. ಅಂವ ಓದ್‌ಲಿ ಬಾಳ ಉಸಾರ್ ನನ್ನಂಗೆ ಅಲ್ಲ. ನಮ್ಮ ಅತ್ತೆ ಮನೆಲಿ ಅತ್ತೆಗೆ ಕೆಲ್ಸ ಮಾಡಿಕೆ ಆದುಲೆತ ದೊಡ್ಡಂವ ರಘುಗೆ ಮದುವೆ ಮಾಡಕೂತ ಹೆಣ್ಣು ಹುಡ್ಕುತ್ತಿದ್ದೋ, ಅಂವ ಮಾವ ತೀರಿಹೋದ ಮೇಲೆ ಬಿ.ಎ.ವರೆಗೆ ಓದಿ ಮನೆ ಕೆಲ್ಸ ನೋಡಿಕಂಡೇ ಮನೇಲೇ ಇತ್ತ್. ನಂಗೆ ರಘುನ ಕಂಡರೆ ರವಿನಷ್ಟು ಸಲಿಗೆ ಇತ್ತ್‌ಲೇ, ರಘು ಯಾಗಲೂ ಎಷ್ಟು ಬೇಕೋ ಅಷ್ಟೇ, ಮಾತ್ ಕಮ್ಮಿ.

ಮತ್ತೆ ಸ್ವಲ್ಪ ಸಮೆಲಿ ಎಲ್ಲವ್ಕೂ ರಜೆ ಸಿಕ್ಕುದು ನೋಡಿಕೊಂಡ್ ಮದುವೆ ನಿಶ್ಚಯ ಮಾಡ್ದೊ. ನಂಗೆ ಬಾರಿ ಕುಷಿ, ರವಿಗೆ ಕಾಲೇಜಿಗೆ ಒಂದು ತಿಂಗ ರಜೆ ಇತ್ತ್. ಮದುವೆತೇಳಿ ಹೆಂಗೂ ನನ್ನ ಅತ್ತೆ ಬುಡ್ದುಲೇ ನಂಗೆ ರವಿನೊಟ್ಟಿಗೆ ಮಾತಾಡಿಕೆ ಒಳ್ಳೆದಾತ್. ಹಾಂಗೇ ಅತ್ತೆ ಮನೆಗೆ ಬಂದ್ ಅಪ್ಪ ಅವ್ವಂಗೆಲ್ಲ ವೀಳ್ಯಕೊಟ್ಟು ನನ್ನ ಒಟ್ಟಿಗೆ ಕರ್ಕಂಡ್ ಹೋದೊ. ಅಪ್ಪ ಅವ್ವಂಗೆ ಜಂಬರ ನಡ್ಸವು ಇತ್ಲೇತಾ ಎಲ್ಲಾ 4 ದಿನ ಮುಂದೆ ಬಂದ್ ನಡ್ಸಿಕೊಡಕೊತ ಕೇಳಿಕೊಂಡೋ ನನ್ನ ಕಂಪ್ಯೂಟರ್ ಪರೀಕ್ಷೆ ಆಗಿತ್ತ್, ಮದುವೆಲಿ ಎಲ್ಲಾ ನಂದ್ ರವೀದೇ ಓಡಾಟ, ನಮ್ಮ ನೋಡಿ ಎಲ್ಲವೂ ಒಳ್ಳೆ ಜೋಡೀತ ಹೇಳ್ಕಂತಿದ್ದೋತ ನಂಗೆ ಮತ್ತೆ ಗೊತ್ತಾತ್.

ಆದರೆ ಈ ಮದುವೇಲಿ ನಾವ್ ಎಷ್ಟು ಕುಶೀಲಿ ಇದ್ದೋನೊ ಅಷ್ಟೇ ಬೇಜಾರ್ ಆಗುವಂತ ಸಂಗತಿ ನಡ್ದು ಹೋತ್, ರವಿನ ಮನೆಯವು ಸುಮಾರು ಜನ ಹೆಂಡ ಕುಡ್ಕಂಡ್ ಯಾವುದೋ ಸಣ್ಣ ವಿಷಯಕ್ಕೆ ನಮ್ಮ ಅಪ್ಪನೊಟ್ಟಿಗೆ ಜಗಳಕ್ಕೆ ಸುರು ಮಾಡ್ದೊ. ಸಣ್ಣ ವಿಷಯಕ್ಕೆ ಸುರಾದ ಜಗಳ ಬಾರಿ ಜೋರಾಗೋತ್. ನಂಗೆ ಅವ್ವಂಗೆಲ್ಲಾ ಏನು ಮಾಡಕೂತ ಗೊತ್ತಾತ್‌ಲೆ, ನಿಜ ಹೇಳಕೂತೇಳ್ರೆ ಒಳಗಿದ್ದ ನಂಗೆ ಯಾವ ಕಾರಣಕೆ ಜಗಳ ಆದ್‌ತೆ ಗೊತ್ತಾತ್‌ಲೇ. ನಮ್ಮ ಅಪ್ಪಂಗೆ ಮುಂದೇ ಸಿಟ್ಟ್ ಜಾಸ್ತಿ.

ಇನ್ನ್ ಜಗಳತೇಳ್ದಮೇಲೆ ಕೇಳೋಕಾ, ನಂಗೆ ಬಾಳ ಹೆದರಿಕೆ ಆತ್. ನಾನ್ ಮರ್ಡಿಕೆ ಸುರು ಮಾಡ್ದೆ, ಜಗಳಲಿ ಅತ್ತೆ ಮಧ್ಯಕ್ಕೆ ಹೋಗಿ ಅಪ್ಪಂಗೆ ಸುಮ್ಮನಿರ್ಕೆ ಹೇಳ್ಕನ ಅಪ್ಪನ ಸಿಟ್ಟು ಅತ್ತೆ ಮ್ಯಾಲೆ ತಿರ್‍ಗಿತ್. ಅಪ್ಪಂದಾಗಿ ಮದುವೆ ಹಾಳಾತ್‌ತ ಅತ್ತೆ ಹೇಳಿಬಿಟ್ಟೋ, ಅಪ್ಪನ ಸ್ವಾಭಿಮಾನಕ್ಕೆ ಬಾಳ ಪೆಟ್ಟಾತ್. ಅಪ್ಪ ತಕ್ಷಣ ನಂಗೆ ಮತ್ತೆ ಅವ್ವಂಗೆ ಆ ಗಳಿಗೇಲಿ ಹೊರ್ಡಿಕೆ ಹೇಳ್ದೊ. ರವಿ ರಘು ಹೋದು ಬ್ಯಾಡತ ಎಷ್ಟೆ ತಡ್ದರೂ ಕೇಳದೆ ಅಪ್ಪ ಹೊರಗೆ ನಡ್ದೇ ಬುಡ್ತ್. ನಾವು ಮರ್‍ಟ್ಕಂಡೇ ಅಪ್ಪನ ಹಿಂದೆ ಹೋದೋ. ಅತ್ತೆಗೆ ಬಾಳಾ ಬೇಜಾರ್ ಆತ್. ಅವ್ಕೆ ಅಪ್ಪನ ಬುಡುವಂಗೆ ಅಲ್ಲ, ಮನೆಯವರ ಬುಡುವಂಗೆ ಅಲ್ಲಾತ ಆಗಿ ಬುಟ್ಟಿತ್.

ನಾವು ಒಂದ್ ಗ್ಯಾನ ಮಾಡ್ರೆ, ದೇವ್ರು ಒಂದು ಗ್ಯಾನ ಮಾಡ್ತ್‌ತೇಳ್ದಂಗೆ ನನ್ನ ಸ್ಥಿತಿ. ಮದುವೆ ಕಳ್ದ ಮ್ಯಾಲೆ ಅಷ್ಟರವರೆಗೆ ಲಾಯ್ಕ ಇದ್ದ, ನಮ್ಮ ಮತ್ತೆ ಅತ್ತೆ ಮನೆ ಸಂಬಂಧ ಸ್ವಲ್ಪ ದೂರ ಆದಂಗಾತ್. ಅಪ್ಪಂಗೆ ಬಾಳ ಸಿಟ್ಟಿತ್. ರವಿಗೆ ಇನ್ನು ಮುಂದೆ ಫೋನ್ ಮಾಡಿಕಾದ್ ಕಾಗದ ಬರೆಯಕಾದ್‌ತ ಹೇಳಿಬಿಟ್ಟೊ. ಕಾಗದ ಬಂದರೆ ನಂಗೆ ಕಾಣದಂಗೆ ಹರ್ದ್ ಹಾಕ್‌ತ್ತಿದ್ದೋ. ಮುಂದೆ ಎರ್ಡೇ ತಿಂಗಲಿ ಅಪ್ಪ ನನ್ನ ಮದುವೆ ಬೇರೆ ಹೈದನೊಟ್ಟಿಗೆ ಗೊತ್ತು ಮಾಡಿಬುಟ್ಟೊ. ನಂಗೆ ಬ್ಯಾರೆಯವರ್ನ ಕಣ್ಣೆತ್ತಿ ನೋಡಿಕೆ ಸಹ ಮನ್ಸ್ ಇತ್ತ್‌ಲೆ. ಅವ್ವನೊಟ್ಟಿಗೆ ನಂಗೆ ಮದುವೇ ಬೇಡತ ಹೇಳಿ ಮರ್ಟೆ. ಆದರೆ ಅಪ್ಪನ ಸಿಟ್ಟಿಗೆ ಹೆದ್ರಿ, ಅಪ್ಪನೊಟ್ಟಿಗೆ ಮಾತಾಡಿಕೇ ಆತ್‌ಲೆ.

ನಾನು ಮರ್‍ಟ್ಕಂಡ್ ಇದ್ದಂಗೇ ಮದುವೆ ಹತ್ತ್‌ರ ಬಾತ್. ಇನ್ನು ಮದುವೆಗೆ ಎರ್ಡು ದಿನ ಉಟ್ಟುತ ಹೇಳ್ಕನ ಹೆಂಗೋ ವಿಷಯ ರವಿಗೆ ಗೊತ್ತಾಗಿ ಓಡಿ ಬಾತ್. ಅಂದರೆ ಅವಂಗೆ ಮದುವೆ ಉಟ್ಟುತ ಗೊತ್ತಾಗಿತ್ತಲ್ಲದೆ ಯಾಗ ಏನ್‌ತ ಗೊತ್ತಿತ್ತ್‌ಲೆ. ಗೊತ್ತಾದಂಗೇ ಅಂವ ಓಡಿ ಬಂದಿತ್. ಬಂದವಂಗೆ ಮನೆ ಮುಂದೆ ಹಾಕಿದ ಚಪ್ಪರ ಮುಖಕ್ಕೆ ಬಡ್ದಂಗಾತ್. ರವಿ ಬಾಕನ ಪುಣ್ಯಕ್ಕೆ ಅಪ್ಪ ಇತ್ತ್‌ಲೆ, ರವಿನ ಕಂಡ್ ನಾನು ತಡಿಯಕಾಗದೆ ಮರ್‍ಟ್ಬುಟ್ಟೆ, ರವಿ ಸಹ ಮರ್‍ಟ್ಬುಡ್ತ್. ರವಿ ಬಂದಂಗೆ ನಂಗೆ, 'ನಮ್ಮ ನಿಮ್ಮ ಮನೆಯವರೊಳಗ ಸಂಬಂಧ ಸರಿ ಇಲ್ಲೆತೇಳ್‌ರೆ, ನನ್ನ ನಿನ್ನ ಸಂಬಂಧ ಸಹ ನೀನು ಹಂಗೇತ ಗ್ಯಾನ ಮಾಡಿಬುಟ್ಟತೇಳಿ ಮರ್‍ಟ್ಬುಡ್ತ್, ಕಡೆಗೆ ಹೊರ್ಡಿಕೆ ಎದ್ದೇಬುಡ್ತ್, ಹೋಕನ 'ನನ್ನ ಮರ್ತ್ ಎಲ್ಲಾರ ಲಾಯ್ಕ ಇರ್, ಆದರೆ ನಾನ್ ಮಾತ್ರ ಇನ್ನ್ ಮುಂದೆ ಮದುವೇ ಆದುಲೆ'ತ

ಹೇಳಿ ಅಲ್ಲಿ ನಿಲ್ಲದೆ ಹೋಗಿಬುಡ್ತ್. ರವಿ ಬಂದ ವಿಷ್ಯ ಕೇಳಿ ಅಪ್ಪ ಬಾಳ ಹಾರ್‍ಯಾಡ್ತ್. ನಂಗೆ ಬದುಕಿಕೇ ಮನ್ಸ್ ಇತ್ತ್‌ಲೆ. ಆದರೆ ಸಾಯಕೂ ಬುಡದಂಗೆ ನನ್ನ ಒಬ್ಬ ಅಲ್ಲ ಒಬ್ಬ ಪಾರ ಕಾಯ್ತಿದ್ದೊ.

ಅಂತು ಅಪ್ಪನ ಸಿಟ್ಟಿಗೆ ಹೆದ್ರಿ ಬಾಯಿ ಬುಡಿಕಾಗದೆ ಯಾವನೋ ಕಟ್ಟಿದ ತಾಳಿಗೆ ಕುತ್ತಿಗೆ ಒಡ್ಡಿದ್ದೆ. ನಂಗೆ ಅವನ ಮುಖ ನೋಡಿಕೆ ಸಹ ಮನ್ಸಾತ್ತ್‌ಲೆ. ಅಪ್ಪ ಮಾತ್ರ ಕುಶೀಲಿ ಮೀಸೆ ತಿರ್‍ಗಿಸ್ಕಂಡ್ ನಿತ್ತಿದ್ದದ್ ಕಂಡ್ ಹಲ್ಲು ಕಚ್ಚಿಕಂಡೆ ನಂಗೆ ಬೇರೇನ್ ಮಾಡಿಕೆ ನನ್ನ ಕೈಲಿ ಆದುಲೇತ ಗೊತ್ತ್‌ಟ್ಟು. ಎಲ್ಲವೂ ಮದುವೆತೇಳಿ ಅಷ್ಟು ಕುಶೀಲಿ ಸಂಭ್ರಮಪಟ್ಟವೇತ ಕತೆ ಪುಸ್ತಕಲಿ ಓದಿದವಳಿಗೆ ಮದುವೆ ಮನೆ ಸಾವು ಮನೆನಂಗೆ ಕಾಂಬತ್ತಿತ್ತ್. ಜನರ ಕುಶಿ ನಗೆ ಎಲ್ಲಾ ಕಾಂಬಕನ ನನ್ನ ಹೊಟ್ಟೆ ಉರ್ದು ಸಂಕಟ ಆತಿತ್ತ್. ಅದೇ ರವಿನೊಟ್ಟಿಗೆ ನನ್ನ ಮದುವೆ ಆಗಿದ್ದರೆ, ನನ್ನ ಭಾಗ್ಯ ನೆನೆದ್ ನಾನು ರವಿನ ಗ್ಯಾನ ಮಾಡಿಕೆಸ ಆಗದ್‌ತ ಸುಮ್ಮನೆ ತುಟಿ ಕಚ್ಚಿ ಕಣ್ಣೀರ್ ನುಂಗಿದೆ. ಮದುವೆಲಿ ರಘು ಮಾತ್ರ ಒಂದು ಗಳಿಗೆ ಬಂದಂಗೆ ಕಂಡೆ. ಅತ್ತೆ ಬಾದುಲೆತ ನಂಗೆ ಗೊತ್ತಿತ್ತ್.

ನನ್ನ ಜೀವನ ಒಂದು ಮಿಷನ್‌ನಂಗೆ ಇತ್ತ್. ಮನೆ ಕೆಲಸ ಮಾಡುದು, ಊಟ ಮಾಡ್ದು, ಮಲ್ಗುದು ದಿನಾ ಇದೇ. ಅದರ್ಲಿ ಯಾವುದೇ ಬದಲಾವಣೆ ಇಲ್ಲೆ, ನಂಗೆ ಇಷ್ಟೆ ಮನ್ಸನ ಜೀವಮಾನತ ಆತಿತ್ತ್. ಆ ಮನೇಲಿ ಯಾರೂ ನನ್ನ ಎಂತ ಸಹಾ ಕೇಳ್ತಿತ್‌ಲೆ. ಯಾರಿಗೂ ನನ್ನ ಹಿಂದಿನ ಕತೆ ಗೊತ್ತಿತ್‌ಲೆತ ಕಂಡದೆ. ಜನತೇಳ್ರೆ ನಾವಿಬ್ಬರು, ಅತ್ತೆ ಮತ್ತೆ ಒಬ್ಬ ನಾದಿನಿ ಇಷ್ಟ ಜನ, ಮಾವ ಇತ್ತ್‌ಲೆ. ಎಲ್ಲವೂ ನನ್ನೊಟ್ಟಿಗೆ ಕುಶೀಲಿ ಇರ್ತಿದ್ದೋ, ಆದರೆ ನಂಗೆ ಮಾತ್ರ ಕುದ್ದಲ್ಲಿ ನಿತ್ತಲ್ಲಿ ರವಿನ ಗ್ಯಾನ ಆತಿತ್. ಮದುವೆಗೆ ಮುಂದೆ, ರವಿನ ಮದುವೆ ಆಗಿ ರವಿನೊಟ್ಟಿಗೆ ಹಂಗೆ ಇರಕು ಹಿಂಗೆ ಇರಕುತೆಲ್ಲಾ ಹೇಳಿ ಕಟ್ಟಿದ್ದ ಕನಸಿನ ಮನೆ ಬಿದ್ದು ಪುಡಿ ಪುಡಿಯಾಗಿತ್ತ್. ಮದುವೆತ ಕಳ್ದ ಮೇಲೆ ನಾನ್ ಮನೆಗೇ ಹೋಗಿತ್ತ್‌ಲೆ. ನಂಗೆ ಈಗ ಎಲ್ಲಾ ಒಂದೇ. ಅಲ್ಲಿ ಇದ್ದರು ಒಂದೇ, ಇಲ್ಲಿ ಇದ್ದರೂ ಒಂದೆ. ಮನೆಗೆ ಬಾಕೆ ಹೇಳಿ ಕಳ್ಸಿರೂ ಹೋತ್‌ಲೆ ಬಹುಶಃ ಎಲ್ಲವೂ ಗಂಡನ ಮ್ಯಾಲೆ ಪ್ರೀತಿಗಾಗಿ ಹೋತ್‌ಲೆತ ತಿಳ್ಕಂಡಿದ್ದೋತ ಕಂಡದೆ. ಯಾರೂ ಬಲಾತ್ಕಾರ ಮಾಡ್ತಿತ್‌ಲೆ.

ನನ್ನ ಮದುವೆ ಆಗಿ ಆರ್ ತಿಂಗ ಆಗಿತ್ತ್, ಆಗ ಬೇಸಿಗೆ, ಸ್ಕೂಲಿಗೆ ರಜ ಇತ್ತ್‌ತ ನನ್ನ ಅತ್ತಿಗೆ ಮಕ್ಕ ಎಲ್ಲಾ ಬಂದಿದ್ದೊ, ಎಲ್ಲಾ ಕೂಡಿಕಂಡು ಯಾಗೋಳು ಹೊಳೆಗೆ ಹೋಗಿ ಈಜಿಕೆ ಕಲಿಯತ್ತಿದ್ದೊ. ಸುಮಾರ್ ಸಲ ನಾನು ಸಹ ಒಟ್ಟಿಗೆ

ಹೋತಿದ್ದೆ. ದಿನಾ ಹೋಗಿ ಹೋಗಿ ಬೇಜಾರ್‌ತ ನಾನು ಅಂದು ಹೋತ್‌ಲೆ. ಅಂದ್ ಅವೆಲ್ಲಾ ತೋಟ ಎಲ್ಲಾ ಸುತ್ತಿ ಹೊಳೆಗೆ ಹೋದವು ಎಷ್ಟೋತ್ತಾರೂ ಬಾರದಿರ್ಕನ ನಂಗೆ ಹೆದ್ರಿಕೆ ಆತ್. ನಾನು ಅತ್ತೆಗೆ ಹೇಳ್ಕನ ಅಂವ ಹಂಗೆ ಹೊಳೆಗೆ ಹೋದರೆ ಅವಂಗೆ ಹೊತ್ತೇ ಗೊತ್ತಾದುಲೆ ಮತ್ತೆ ಅಲ್ಲೇ ದೊಡ್ಡ ಮನೆಗೆ ಹೋಗಿರ್ದು ಮಕ್ಕಳ ಕರ್ಕಂಡ್‌ತ ಹೇಳ್ದೊ. ಮೂರು ಗಂಟೆಯಾದರೂ ಬಾರದಿರ್ಕನ ನಂಗೆ ಮನ್ಸ್ ಕೇಳ್ತ್‌ಲೆ. ನನ್ನ ನಾದಿನಿನ ನೋಡಿ ಬಾಕೆ ಕಳ್ಸಿದೆ. ಅವ್ಳು ಹೋದ ಸ್ವಲ್ಪ ಹೊತ್ತ್‌ಲಿ ಅವರ ಜೀವ ಇಲ್ಲದ ಶರೀರಾನ ಜನ ತಕ್ಕಂಡ್ ಬಾಕನ ನಾನು ಬುಡ ಕಡ್ದ ಬಾಳೆನಂಗೆ ನೆಲಕ್ಕೆ ಬಿದ್ದೆ ಮತ್ತೆ ಏನಾತ್‌ತ ಗೊತ್ತಾತ್‌ಲೆ.

ನಂಗೆ ಸ್ವಯ ಬಾಕನ ಮನೆಲಿ ಜನ ಕೂಡಿದ್ದೋ, ನಂಗೆ ಒಮ್ಮೆ ಅರ್ಥ ಆತ್‌ಲೆ ಮತ್ತೆ ಗ್ಯಾನ ಬಂದ್, ಹೋಗಿ ಅವರ ಮ್ಯಾಲೆ ಬಿದ್ದೆ. ನಾನು ರವಿನ ಮರ್‍ಯಕೂತ ಪ್ರಯತ್ನ ಪಟ್ಟ್‌ಕಂಡ್ ಇರ್ಕನೇ ಹಿಂಗೇ ಆಗಿತ್ತ್. ಅವರ ಒಳ್ಳೆತನಲಿ ನಾನ್ ನಿಜವಾಗಿ ಸುಖಲಿ ಇದ್ದೆತೇಳ್ರೆ ಸುಳ್ಳಲ್ಲ. ರವಿನ ಗ್ಯಾನ ಒಂದು ಇಲ್ಲದಿದ್ರೆ ನಾನು ಬಹಳ ಕುಶಿಯಾಗಿದ್ದೆ. ಆದರೆ ನನ್ನ ಹಣೆಲಿ ಎಂತೆಲ್ಲಾ ಬರ್ದುಟ್ಟೋತ ಮರ್‍ತೆ. ಅಪ್ಪ ಅವ್ವ ಬಾಕನ ನಂಗೆ ತಡ್ಕಣಿಕೆ ಆತ್‌ಲೆ. ಅವ್ವನ ತಬ್ಬಿ ಮರ್‍ತೆ. ಈಗ ಅಪ್ಪಂಗೆ ನಿಜವಾಗಿ ಬ್ಯಾಸರ ಆಗಿತ್ತ್‌ತ ಮುಖ ನೋಡ್ಕನೇ ಗೊತ್ತಾತ್.

ನಿನ್ನ ರವಿಗೆ ಕೊಟ್ಟಿದ್ದರೆ ಸುಖಲೀ ಇರ್‍ತಿದ್ದ, ಏನೋ ನನ್ನ ಸಿಟ್ಟ್‌ಲಿ ನಿನ್ನ ಜೀವಮಾನ ಹಾಳ್ ಮಾಡಿಬುಟ್ಟೆತ ಹೇಳಿ ಅಪ್ಪ ಮರ್‍ಡ್‌ಕನ ನಾನ್ ಅವರ ಮುಖ ನೋಡ್ದೆ. ಅವು ನಿದ್ದೆ ಮಾಡ್ದಂಗೆ ಮುಖಲಿ ನಗೆ ಇತ್ತ್. ಅಂದ್ ಅವು ನನ್ನ ಶನಿಗೆ ಹೊಳೆಗೆ ಹೋಗದೆ ಹೊಸದಾಗಿ ತೋಂಡಿದ್ದ ಕೆರೆಗೆ ಮೀಯಕ್ಕೆ ಹೋಗಿ ಆಳ ಗೊತ್ತಾಗದೆ ನನ್ನ ಬಾಳ್‌ನ ಕತ್ತಲೆಗೆ ದೂಡಿದ್ದೊ. ಏನ್ ಮಾಡ್ದು ನನ್ನ ವಯಸ್ಸ್‌ನವು ಇನ್ನೂ ಎಷ್ಟೋ ಜನಕೆ ಮದುವೆನೇ ಆಗಿತ್ತ್‌ಲೆ. ಅವು ಇಲ್ಲದ ಮನೆಲಿ ಇರ್ಕೆ ಆಗದೆ ಮತ್ತೆ ಒಂದು ತಿಂಗಳ್‌ಲಿ ಅಪ್ಪನ ಮನೆಗೆ ಬಂದುಬುಟ್ಟೆ.

* * * * *

ಮತ್ತೆ ನಾನ್ ಕಾಲೇಜಿಗೆ ಸೇರಿ ಬಿ.ಎ. ಮಾಡ್ಕಂಡೆ, ಒಟ್ಟಿಗೆ ಇನ್ನೊಂದು ಕಂಪ್ಯೂಟರ್ ಕೋರ್ಸ್ ಮಾಡ್ಕಂಡೆ. ಮತ್ತೆ ಅಪ್ಪಂಗೆ ಭಾರ ಆಗಿರ್ಕೆ ಮನ್ಸ್ ಬಾತ್ಲೆ, ನಾನ್ ಕೆಲ್ಸಕ್ಕೆ ಅರ್ಜಿ ಹಾಕಿಕೆ ಸುರು ಮಾಡ್ದೆ. ನಾನ್ ಅಪ್ಪನ ಮನೆಗೆ

ಬಂದ ಸುರೂಲಿ ರವಿ ಅಪ್ಪಂಗೆ ಕಾಗದ ಬರ್ದ್ 'ರಶ್ಮಿಗೆ ಹಿಂಗೆ ಆದು ಬ್ಯಾಡಾಗಿತ್ತ್'ತ ಬರ್ದಿತ್. ಮುಂದೆಲ್ಲಾಗಿದ್ದರೆ ಅಪ್ಪಂಗೆ ಹಿಂಗೆ ರವಿ ಕಾಗದ ಬರ್ದಿದ್ದರೆ ಸಿಟ್ಟ್‌ಲಿ ಹರ್ದ್ ಹಾಕ್‌ತಿದ್ದೋ. ಆದರೆ ಅಳಿಯನ ಸಾವು ಅಪ್ಪನ ಹಣ್ಣ್ ಮಾಡಿತ್ತ್. ತಾವ್ ತಪ್ಪಿತಸ್ಥನಂಗೆ ನನ್ನ ಮುಖ ಕಂಡರೆ ಮುಖ ತಗ್ಗ್‌ಸ್ತಿದ್ದೊ. ಅಂದ್ ಆ ಕಾಗದನ ನನ್ನ ಕೈಗೆ ಕೊಟ್ಟಿದ್ದೊ. ಆದರೆ ನಾನ್ ಕಾಗದ ಓದಿ ಹಂಗೇ ವಾಪಸ್ಸ್ ಕೊಟ್ಟಿದ್ದೆ. ನಾನ್ ಇನ್ನ್ ರವಿನ ಗ್ಯಾನ ಮಾಡ್ದು ತಪ್ಪ್‌ತ ನಂಗೆ ಗೊತ್ತಿತ್ತ್.

ಮತ್ತೆ ಮೂರ್ ವರ್ಷಲಿ ರವಿನ ವಿಷಯ ಒಂದೂ ಗೊತ್ತಾತ್‌ಲೆ. ಅವಂಗೆ ಮೈಸೂರ್‌ಲಿ ಕೆಲ್ಸ ಆಗುಟ್ಟುತ್ತ ಯಾರೋ ಹೇಳಿದ್ದೋ. ನನ್ನ ಬಿ. ಎ. ಆಗಿ ಕಂಪ್ಯೂಟರ್ ಆಗಿದ್ದರಿಂದ ನಂಗೆ ಬೆಂಗ್ಳೂರ್ ಕಂಪೆನಿಲಿ ಕೆಲ್ಸ ಸಿಕ್ಕಿತ್ತ್. ಅಷ್ಟು ದೂರ ಕಳ್ಸಿಕೆ ಅವ್ವ ಅಪ್ಪಂಗೆ ಇಷ್ಟ ಇತ್ತ್‌ಲೆ. ನಾನ್ ತಮ್ಮ ನವೀನನ ಕರ್‍ಕಂಡ್ ಹೋಗಿ ಅಲ್ಲೇ ರೂಮ್ ಮಾಡಿಕಂಡ್ ಅವನ ಕಾಲೇಜಿಗೆ ಸೇರ್ಸಿದೆ. ಹಿಂಗೇ ಒಂದು ವರ್ಷ ಕಳ್ದಿತ್ತ್. ಹಂಗೇ ಇರ್ಕನ ಅಪ್ಪನ ಫೋನ್ ಬಂದ್ ಈಗ ಹೊರ್ಟು ಬಂದಿದ್ದೆ. ನವೀನಂಗೆ ರಜಾ ಇಲ್ಲೆತಾ ಅಂವ ಬಾತ್‌ಲೆ.

ನಾನ್ ಮಡಿಕೇರಿಲಿ ಇಳ್ದ್ ಬ್ಯಾಗ ಮನೆ ಸೇರಕೂತೇಳ್ಕಂಡ್ ಟ್ಯಾಕ್ಸಿ ಮಾಡ್ಕಂಡೇ ಹೋದೆ. ದೂರಂದ ನೋಡ್ಕನ ಎಲ್ಲಾ ಮಾಮೂಲ್‌ನಂಗೆ ಕಾಂಬತಿತ್ತ್. ನಾನು ಮನೆಗೆ ಹೋಗಿ ಅವ್ವಾತ ಕರ್‍ಯಕನ ಹೊರಗೆ ಬಂದ ಅವ್ವ ಭಾರಿ ಕುಶೀಲಿ ಇದ್ದಂಗೆ ಕಾಂಬತಿತ್ತ್. ನಂಗೆ ಹೋದ ಜೀವ ಬಂದಂಗಾತ್. ಯಾಕೆ ತೇಳ್ರೆ ನಾನು ಸುರೂಂದೆ ಜೀವನಲಿ ಪೆಟ್ಟು ತಿಂದವ್ಳು ಮತ್ತೆ ಮತ್ತೆ ನನ್ನ ಮನ್ಸ್ ಪೆಟ್ಟ್‌ನ ಸಹಿಸ್ಕಂಬಕ್ಕೆ ತಯಾರಿತ್‌ಲೆ. 'ಅವ್ವಾ ಉಸಾರೊಳ, ಅಪ್ಪ ಹೆಂಗುಟ್ಟುತ' ಒಂದೇ ಉಸ್ರಿಗೆ ಕೇಳ್ದೆ. 'ಎಲ್ಲಾವೂ ಉಸಾರೊಳ, ಕಾಲು ತೊಳ್ಕಂಡ್ ಒಳಗೆ ಬಾತ' ಅವ್ವ ನನ್ನ ಬ್ಯಾಗ್ ತಕಂಡ್ ಒಳಗೆ ಹೋತ್, ನಾನ್ ಕಾಲು ತೊಳ್ದ್ ಒಳಗೆ ಹೋಕನ ನನ್ನ ಕಣ್ಣ್‌ನೇ ನಂಗೆ ನಂಬಿಕೆ ಆತ್‌ಲೆ. ಅತ್ತೆ ಮತ್ತೆ ರವಿ ಕುದ್ದಿದ್ದೊ ರೂಮ್‌ಲಿ! ನಂಗೆ ಏನ್ ಮಾತಾಡೋಕುತೇ ಗೊತ್ತಾತ್‌ಲೆ. ಅವೇ ನನ್ನ ಮಾತಾಡ್ಸಿದೊ. ಅಷ್ಟೊತ್ತಿಗೆ ಅವ್ವ ಕಾಫಿ ತಕಂಡು ಅಲ್ಲಿಗೆ ಬಾತ್. ಮತ್ತೆ ಎಲ್ಲಾ ಕುದ್ದುಕಂಡ್ ಅಲ್ಲೆ ಮಾತಾಡ್ದೊ. ನಂಗೆ ಮಾತ್ರ ರವಿನ ಮುಖ ನೋಡಿಕೇ ಆತ್‌ಲೆ. ಅಂವ ಬಾಳ ಲಾಚಾರ್ ಆಗಿತ್ತ್. ಅದ್ ನನ್ನಂದಾಗೇತ ನಂಗೆ ಆತಿತ್ತ್. ಅಷ್ಟೊತ್ತಿಗೆ ತೋಟಕ್ಕೆ ಹೋಗಿದ್ದ ಅಪ್ಪಸ ಬಾತ್. ನಂಗೆ ಯಾಕೋ ಈಗ ಅಪ್ಪನೊಟ್ಟಿಗೆ ಸೀದಾ ಮಾತಾಡಿಕೆ ಒಂತರ ಆತಿತ್ತ್. ಮುಂದೆನ ಸಿಟ್ಟ್‌ನ ಅಪ್ಪ

ಆಗಿದ್ದರೆ ಅತ್ತೆನ ರವಿನ ಸೇರ್ಸಿಕಿತ್ತ್‌ಲೇನೊ. ಆದರೆ ಈಗ ಅಪ್ಪ ಅಳಿಯ ಸತ್ತ ಮೇಲೆ ಬಾಳ ಬದಲಾಗಿಬುಟ್ಟಿತ್.

ಅಂದ್ ಸಾಯಂಕಾಲ ಎಲ್ಲಾ ಊಟ ಮಾಡ್ಕನ ಅತ್ತೆ ಸುರುಲಿ ಮಾತಿಗೆ ಸುರು ಮಾಡ್ಡೊ. ಆಗ ನಂಗೆ ಗೊತ್ತಾದ್ ಅವು ಯಾಕೆ ಬಂದದ್, ನನ್ನ ಯಾಕೆ ಕರ್ಸಿದ್‌ತ. ರವಿ ಪುನಃ ನನ್ನ ಮದುವೆ ಮಾಡಿಕಣಿಕೆ ಹೇಳ್ಕನ ನಂಗೆ ಏನು ಮಾತಾಡುಕುತೇ ಗೊತ್ತಾತ್‌ಲೇ. ಈ ವಿಷಯತ ಗೊತ್ತಿದ್ದರೆ ನಾನು ಅಲ್ಲಿಂದ ಬಾಕೆ ಇತ್ತ್‌ಲೆತ ಹೇಳಿ ಅರ್ಧ ಊಟ ಮಾಡಿ ಎದ್ದ್‌ಬುಟ್ಟೆ. ರವಿ ರಶ್ಮಿನಲ್ಲದೆ ಬ್ಯಾರೆಯರ್ನ ಮದುವೆ ಆದುಲೆತ ಹಟ ಹಿಡ್ಡ್‌ರ್‌ಂದ ಅವನ ಹಟಕ್ಕಾಗಿ ಅತ್ತೆನವು ಮತ್ತೆ ಮಂಜಗಾಗಿ ನಮ್ಮಲ್ಲಿಗೆ ಬಂದಿದ್ದೊ. ನಂಗೆ ಕಣ್ಣೀರ್ ಬಾತ್. ನಾನ್ ಅತ್ತೆಗೆ ಹೇಳ್ದೆ, ರವಿಗೆ ಬೇರೆಲ್ಲಾರ್ ಒಳ್ಳೆ ಕಡೆ ನೋಡಿ ಮದುವೆ ಮಾಡಿ ಅತ್ತೆ. ನಂಗೆ ಇನ್ನೊಮ್ಮೆ ಮದುವೆ ಆಕೆ ಇಷ್ಟ ಇಲ್ಲೆ. ನಂದೆಲ್ಲಾ ಕಳ್ದ್ ಹೋತ್‌ತ ಹೇಳಿ ರೂಮಿಗೆ ಹೋಗಿ ಮಲ್ಗಿಬುಟ್ಟೆ.

ನಾನ್ ಬೆಳಿಗ್ಗೆ ಏಳ್ಕನ ರವಿ ಇನ್ನು ಎದ್ದಿತ್ತ್‌ಲೆ. ನೆನ್ನೆ ಕುಶೀಲಿ ಇದ್ದ ಎಲ್ಲರ ಮುಖ ಇಂದ್ ಬಾಡಿಕಂಡಿತ್. ಅತ್ತೆ ನನ್ನ ಕಂಡ್ ಸುಮ್ಮನೆ ಅತ್ತ ಹೋಕನ ನಂಗೆ ಒಂತರಾ ಆತ್. ಎಷ್ಟೂ ಹೊತ್ತಾದರೂ ರವಿ ಏಳದಿರ್ಕನ ನಂಗೆ ಮನ್ಸ್ ಕೇಳ್‌ತ್‌ಲೆ. ಮುಂದೆ ಆಗಿದ್ದರೆ ಓಡಿ ಅವನ ಎಳ್ದ್ ಅವನ ಕೈಂದ ಬೈಸಿಕಂಬತಿದ್ದೆ. ಆದರೆ ಈಗ ಹಂಗೆ ಹೋಕೆ ಆದೋ? ಮತ್ತೆ ಸ್ವಲ್ಪ ಹೊತ್ತಿಗೆ ರೂಮಿಗೆ ಹೋದ ಅತ್ತೆ ರವಿಗೆ ಒಳ್ಳ ಜ್ವರ ಬಂದ್‌ಬುಟ್ಟುತ್ತಾ ಹೇಳಿಕಂಡ್ ಕಣ್ಣುಜ್ಜಿಕಂಡ್ ಬಂದೊ. ನಂಗೆ ಯಾರೋ ನನ್ನ ಕರುಳ್‌ನ ಕಿತ್ತಂಗೆ ಆತ್. ರವಿನ ಸುಖಕ್ಕಾಗಿ ನಾನ್ ಮದುವೆ ಆದ್‌ಲೆತ ಹೇಳ್ದರೂ ಆ ಪ್ರೀತಿನ ಮರ್‍ಯಕಾದೋ? ರವಿ ಎಲ್ಲರೂ ಲಾಯ್ಕ ಇರಕುತ ನನ್ನ ಆಸೆ, ಆದರೆ ನನ್ನಂದಾಗಿ ಅವಂಗೆ ಜ್ವರ ಬಂದದ್ ನೋಡಿ ಹೆದ್ರಿಕೆ. ಅಪ್ಪ ಬೇಗ ಡಾಕ್ಟರ್‌ನ ಕರ್ಕಂಡ್ ಬಾಕೆ ಮಡಿಕೇರಿಗೆ ಓಡ್ಡೊ.

ನಂಗೆ ತಡಿಯಕಾಗದೆ ಮಧ್ಯಾಹ್ನ ಆಕನ ಮೆಲ್ಲೆ ರವಿನ ರೂಮಿಗೆ ಹೋದೆ. ಅವನ ಹತ್ರ ಕುದ್ದಿದ್ದ ಅತ್ತೆ ನನ್ನ ಕಂಡ್ ಸ್ವಲ್ಪ ನೋಡಿಕವ್ವಾ ಬನ್ನೇತ ಹೇಳಿ ಹೊರಗೆ ಹೋದೋ.

ರವಿ ಹಾಸಿಗೆಲಿ ಕಣ್ಣು ಮುಚ್ಚಿ ಮಲ್ಗಿತ್. ನಾನ್ ಮೆಲ್ಲೆ ರವಿನ ಹಣೆಗೆ ಕೈ ಮಡ್ಗಿದೆ. ಅದು ಸುಡ್ತಿತ್. ರವಿ ನಾನ್ ಕೈಯಿಡ್‌ಕನ ಒಮ್ಮೆ ಕಣ್ಣು ಬಿಟ್ಟು ನೋಡಿ ನನ್ನ ಕೈಯಿನ ಹಿಡ್ಕಂಡು ಹಂಗೇ ಕಣ್ಣ್ ಮುಚ್ಚಿತ್. ಅವನ ಕಣ್ಣಿಂದ

ಎರ್ಡ್ ಹನಿ ನೀರ್ ಬಾತ್. ನಂಗೆ ಅದು ನೋಡಿ ತಡೆಯಕಾತ್‌ಲೆ. ಅವನ ಕಣ್ಣೀರ್ ವರ್ಸಿದೆ. ಅಷ್ಟೊತ್ತಿಗೆ ಅತ್ತೆ ಪ್ಲೇಟ್‌ಲಿ ರೊಟ್ಟಿ ಮತ್ತೆ ಕಾಫಿ ತಕಂಡು ಬಂದ್ 'ಯಾರು ಹೇಳ್ದ್‌ರೂ ಬೆಳಿಗ್ಗೆಂದ ಒಂದು ಚೂರ್ ತಿಂತ್‌ಲೆ. ನೀನಾರ್ ಹೇಳಿ ತಿನ್ಸ್‌ತ ಹೇಳಿ ನನ್ನ ಕೈಗೆ ಕೊಟ್ಟು ಹೋದೋ. ನಂಗೆ ಒಮ್ಮೆ ಒಂತರಾ ಆತ್. ಆಗಲಿ ರವಿ ಉಸಾರಾದರೆ ಸಾಕುತೇಳಿ ರವಿನ ಮೆಲ್ಲೆ ಕರ್ದೆ.

ರವಿ 'ನಂಗೆ ಏನೂ ಬ್ಯಾಡ ನಾನ್ ಯಾಕೆತ ತಿನ್ನಕು'ತೇಳಿ ತಿರ್ಗಿ ಮಲ್ಗಿ ಬುಡ್ತ್.

'ಪ್ಲೀಸ್ ಎದ್ದ್ ತಿನ್ನ್ ರವಿ. ತಿನ್ನದಿದ್ದರೆ ವೀಕ್‌ನೆಸ್ ಬಂದದೆ. ನೀನು ಒಮ್ಮೆ ಉಸಾರಾಗ್ ಮತ್ತೆ ಮಾತಾಡ್ನೊತ ಹೇಳಿ ಅವನ ಇತ್ತ ತಿರ್ಗಿಸಿ ಅವನ ಕೈ ಹಿಡ್ದ್ ಕೂರ್ಸಿದೆ.

ಮತ್ತೆ ಅಂವ ಮಾತಾಡದೆ ಕುದ್ದ್‌ಕಂಡ್ ನಾನ್ ಕೊಟ್ಟಂಗೆ ಒಂದು ರೊಟ್ಟಿತಿಂತ್. ಮತ್ತೆ ಕಾಫಿ ಕುಡ್ಸಿ ಮಲ್ಗಿಸಿ ಕಂಬಳಿ ಹೊದ್ಸಿ ಅಲ್ಲೆ ಕುದ್ದೆ. ಈಗ ಅವನ ಮುಖ ಸ್ವಲ್ಪ ಗೆಲುವಾದಂಗೆ ಕಂಡೆ. ಅಷ್ಟೊತ್ತಿಗೆ ಡಾಕ್ಟರ್ ಬಂದ್ ಅವನ ಟೆಸ್ಟ್ ಮಾಡಿ ಒಂದು ಇಂಜೆಕ್ಷನ್ ಕುತ್ತಿ ಹೋತ್. ಮತ್ತೆ ಅಪ್ಪನ ಕರ್ದ್ ಅವಂಗೆ ಮೆಂಟಲ್ ಶಾಕ್ ಆಗುಟ್ಟು, ಅದ್‌ಕೆ ಜ್ವರ ಬಂದುಟ್ಟುತ ಹೇಳಿ ವಿಷಯ ಎಂತತ ಗೊತ್ತಿದ್ದರೆ ಸರಿ ಮಾಡಿತ ಹೇಳಿ ಹೋದೊ. ನಂಗೆ ಚುಚ್ಚಿದಂಗಾತ್.

ಮತ್ತೆ ಎರ್ಡ್ ದಿನ ಬುಡದೆ ಜ್ವರ ಇತ್ತ್. ಮೂರನೆ ದಿನ ರಾತ್ರಿ ಅವಂಗೆ ಜ್ವರ ಜೋರಾಗಿ ರಶ್ಮಿ ರಶ್ಮಿತ ಹೇಳಿಕೆ ಸುರು ಮಾಡ್ತ್. ನಂಗೆ ಹೆದ್ರಿಕೆ ಆತ್. ಅಂದು ರಾತ್ರಿ ಯಾರಿಗೂ ನಿದ್ದೆ ಇಲ್ಲೆ. ನಾನ್ ರೂಮ್‌ಲಿ ತಲೆ ತಗ್ಗ್‌ಸಿ ಕುದ್ದಿದ್ದೆ. ಒಳಗೆ ಬಂದ ಅತ್ತೆ ನನ್ನ ಕೈ ಹಿಡ್ದ್. ರಶ್ಮಿ ನಿನ್ನ ದಮ್ಮಯ್ಯತೇಳ್ನೆ. ಮದುವೆಗೆ ಒಪ್ಪಿ ನನ್ನ ರವಿನ ಉಳ್ಸಿಕೊಡು. ನಿಂಗೆ ಯಾವ್ದೇ ತೊಂದರೆ ಆಗದಂಗೆ ನೋಡಿಕಂಡವೇತ ಹೇಳಿ ವಳ್ಳ ಮರ್ರು ಬುಟ್ಟೊ. ನಂಗೆ ತಡೆಯಕಾತ್‌ಲೇ. ಹಂಗೆ ಹೇಳ್ಬೇಡಿ ಅತ್ತೆ ರವಿನ ಮೇಲೆ ನಂಗೆಸ ಪ್ರೀತಿ ಉಟ್ಟು. ರವಿಗಾಗಿ ಏನ್ ಬೇಕಾರೂ ಮಾಡ್ನೆತ ಹೇಳ್ದೆ. ಅತ್ತೆಗೆ ಕುಶಿ ಆಗಿ ನನ್ನ ಕೈ ಹಿಡ್ಕಂಡೇ ರವಿನ ಹತ್ರ ಕರ್ಕಂಡ್ ಹೋದೋ.

'ರವಿ ನೋಡ್ ರಶ್ಮಿ ಒಪ್ಪಿ ಬುಡ್ತ್' ಹೇಳ್ಕನ ರವಿ ಕಣ್ಣು ಬುಟ್ಟತ್. ಅವನ ಕಣ್ಣ್ ಆ ಜ್ವರಾಲೂ ನಂಗೆ ಹೊಳ್ದಂಗೆ ಆತ್.

'ನಾನ್ ನೋಡ್ಕಣೆ ಅತ್ತೆ ನೀವು ಮಲ್ಗಿತ ಹೇಳಿ, ನಾನ್ ಅತ್ತೆನ ಕಳ್ಸಿ ರವಿನ

ಹತ್ರ ಕುದ್ದ್‌ಕಂಡೆ'

ರವಿ ನನ್ನ ಕೈನ ಹಿಡ್ಕಂಡ್ ವಳ್ಳೆ ನಿದ್ದೆ ಮಾಡ್ತ್. ಬೆಳಿಗ್ಗೆ ಆಕನ ಅವನ ಜ್ವರ ಎಲ್ಲಾ ಬುಟ್ಟಿತ್. ನಿಶಕ್ತಿ ಇದ್ದರೂ ಮುಖ ಗೆಲುವಾಗಿತ್ತ್.

ನಂಗೆ ಹೋದ ಜೀವ ಬಂದಂಗಾತ್. ನಾನ್ ಮತ್ತೆ ಒಂದು ವಾರ ರಜೆ ತಕಂಡಿದ್ದೆ. ರವಿ ಸಹ ಮತ್ತೆ ಒಂದು ವಾರ ರಜೆ ಜಾಸ್ತಿ ಹಾಕಿತ್ತ್. ನಾಕ್ ದಿನಲಿ ರವಿ ಉಸಾರಾಗಿ ಮುಂದೆನಂಗೆ ಆತ್.

ನಾನು ಮತ್ತೆ ರವಿ ಹೊರ್ಡಿಕೆ ಒಂದಿನ ಮುಂದೆ ಇನ್ನು ಒಂದು ತಿಂಗಲಿ ನಮ್ಮ ಮದುವೆತ ತೀರ್ಮಾನ ಆತ್. ಮತ್ತೆ ಹತ್ತೆ ದಿನಲಿ ರವಿಗೆ ಮೈಸೂರಿಂದ ಬೆಂಗ್ಳೂರಿಗೆ ವರ್ಗ ಆತ್. ರವಿ ತನ್ನ ಜೀವನಲಿ ಮತ್ತೆ ಹೊಸ ಬೆಳಕು ಮೂಡ್ಸಿತ್.

* * * * *

## ಸೇಡು

ಜೈಲ್‌ನ ಗೋಡೆಗೆ ತಲೆ ತಾಂಗಿಕುದ್ದ್ ಬಿಕ್ಕಿ ಬಿಕ್ಕಿ ಮರ್ದ್ತಿತ್ತ್ ಕಿಶನ್. ಶ್ರುತಿನ ಗ್ಯಾನ ಅವನ ಕುತ್ತಿ ಕುತ್ತಿ ಹಿಂಸೆ ಮಾಡ್ತಿತ್ತ್.

ತನ್ನ ಮುಂದೆ ಬೂಟ್‌ನ ಸದ್ದಾಕನ ತಲೆಯೆತ್ತಿ ದಿಟ್ಟಿಸಿತ್. ಸಬ್ ಇನ್ಸ್‌ಪೆಕ್ಟರ್ ಪ್ರಸಾದ್ ದಾಟಿ ಹೋಗ್‌ತಿತ್ತ್. ಒಟ್ಟಿಗೆ ಇದ್ದ ಮನ್ಸನ ಕಂಡ್ ಕಿಶನ್ ರೋಷಂದ 'ಥೂ...' ತೇಳಿ ಉಗ್ದು ಕಟಕಟಾತ ಹಲ್ಲ್ ಕಚ್ಚಿತ್.

ಆ ಮನ್ಸ ಹುಸಿನಗೆಂದ "ಪೂವರ್ ಫೆಲೋ, ಮಾಡ್‌ಬಾರ್ದ್ ಮಾಡಿ ಈಗ ಅನುಭವಿಸ್ತಾ ಉಟ್ಟ್ ಹುಚ್ಚ"ತೇಳ್ತ್ ಎಸ್.ಐ.ನೊಟ್ಟಿಗೆ. ಎಸ್.ಐ. ಪ್ರಸಾದ್ ತಿರಸ್ಕಾರಂದ ಕಿಶನ್‌ನ ದುರುಗುಟ್ಟಿ ನೋಡ್ತ್.

"ಹುಚ್ಚ.... ಹುಚ್ಚ.. ಹಹಹಹಾ... ನಾನ್ ಹುಚ್ಚನಾಗಿದ್ದರೆ ಲಾಯ್ಕ ಇತ್ತ್, ಅಯ್ಯೋ ಶೃತಿ ನೀನಾರೆ ಬಂದ್ ಸತ್ಯ ಸಂಗತಿ ಹೇಳಿಯಾ" ನೀನ್ ಎಲ್ಲಿ ವಳ... ನಿಂಗೆ ಎಂತ ಆಗುಟ್ಟೋ..."ತೇಳಿ ಮುಖ ಮುಚ್ಚಿ ಮರ್ದಿಕೆ ಶುರು ಮಾಡ್ತ್.

* * * * *

ಕಮಲ ಸಿದ್ಧಾಪುರದ ಬಡ ಹೆಂಗಸ್. ಸಣ್ಣ ವಯ್ಸ್‌ಲೇ ತನ್ನ ಗಂಡನ ಕಳ್ಕಂಡ್ ನಾಕ್ ವರ್ಷದ ಮಂಜ ಕಿಶನ್‌ನೊಟ್ಟಿಗೆ ಅವರಿವರ ಮನೆ ಕೆಲ್ಸ ಮಾಡಿ ಮಂಜನ ಸಾಕಿಕಂಡ್ ಬದ್ಕ್‌ತಿತ್ತ್. ಕಿಶನ್‌ನ ಅಪ್ಪ ಸಾಯಕನ ಅವ್ಕೆ ಯಾವ್ದೇ ಆಸ್ತಿ ಮಾಡಿ ಇಟ್ಟಿತ್‌ಲೆ. ಅವ್ಕೆ ಇದ್ದ ಸಣ್ಣ ಚಾಕರಿಲಿ ಹೆಣ್ಣ್ ಮತ್ತೆ ಮಂಜನ ಸಾಕ್‌ತ್ತಿದ್ದೊ. ಆದರೆ, ಈಗ ಕಮಲಂಗೆ ಬ್ಯಾರೆ ದಾರಿನೇ ಇತ್ತ್‌ಲೆ.

ದೂರದ ನೆಂಟ ನಂಜಪ್ಪನವು ಕಿಶನ್‌ನ ಓದ್ಸಿಕೆ ಸಹಾಯ ಮಾಡ್‌ತಿದ್ದೊ. ನಂಜಪ್ಪನವ್ರ ಹೆಣ್ಣ್ ಕುಸುಮ, ಕಮಲನ ಪ್ರೀತಿಂದ ಕಾಂಬತಿದ್ದೊ. ಅವ್ಕೆ ಅವ್ರ ಮ್ಯಾಲೆ ಕನಿಕರನೂ ಇತ್ತ್. ಅವು ಸಹ ಅವ್ಕೆ ಎಲ್ಲಾ ರೀತಿಲಿ ಸಹಾಯ ಮಾಡ್‌ತ್ತಿದ್ದೊ. ಕಮಲಂಗೆ ಅವ್ರ ಸಹಾಯ ಪಡ್ಕಣಿಕೆ ಇಷ್ಟ ಇಲ್ಲದಿದ್ದರೂ ಬ್ಯಾರೆ ದಾರಿ ಇತ್ತ್‌ಲೆ. ಅದ್ಕಾಗಿ ಕಮಲ ಅವ್ರ ಮನೆ ಕೆಲ್ಸಲಿ ಸಹಾಯ ಮಾಡಿಕಂಡ್ ಆದಷ್ಟ್ ಅವ್ರ ಋಣನ ಕಮ್ಮಿ ಮಾಡಿಕಂಬತಿತ್ತ್.

ಕಮಲನ ಮಮತೆಂದ, ನಂಜಪ್ಪನವ್ರ ಸಹಾಯಂದ, ಕುಸುಮನವ್ರ ಪ್ರೀತಿಂದ ಕಿಶನ್ ದಿನಂದ ದಿನಕ್ಕೆ ಬೆಳ್ಕಂಡ್ ಬಂದ್ ಮುನ್ನಡೆಯತ್ತಿತ್ತ್.

ಕಿಶನ್ ನಂಜಪ್ಪನವ್ರ ಮನೆ ಮಂಜನಂಗೆ ಆಗಿ ಹೋಗಿತ್ತ್. ಅವನೂ ಅವ್ಕೆ ಬಹಳ ಸಹಾಯ ಮಾಡ್‌ತ್ತಿತ್ತ್.

ನಂಜಪ್ಪನವ್ರ ಒಬ್ಬಳೇ ಮಗ್ಳು ಶ್ರುತಿ ಮತ್ತೆ ಕಿಶನ್ ಒಂದೇ ಕ್ಲಾಸ್‌ಲಿ ಇದ್ದೊ. ನಂಜಪ್ಪನವು ಶಾಲೆಲಿ ಫೀಸ್ ಕಟ್ಟ್‌ಕನ ಕಿಶನ್‌ನ ಫೀಸು ಸಹ ಕಟ್ಟ್‌ತ್ತಿದ್ದೊ. ಮಗಳಿಗೆ ಬಟ್ಟೆ ಮಾಡ್ಕನ ಕಿಶನ್‌ಗೂ ಬಟ್ಟೆ ಕೊಡ್ಸ್‌ತಿದ್ದೊ.

ಆದರೆ, ಸ್ವಾಭಿಮಾನಿ ಕಮಲ ಬ್ಯಾಡತೇಳ್ರೆ ಕುಸುಮ ಪ್ರೀತಿಂದ ಗದರ್‌ಸಿ ತಾವ್ ಕಿಶನ್‌ಂದ ಒಮ್ಮೆಗೆ ಬಡ್ಡಿ ಸಮೇತ ವಸೂಲಿ ಮಾಡ್ವೆತ ಹೇಳ್‌ತಿದ್ದೊ.

ಕಿಶನ್ ಮತ್ತೆ ಶ್ರುತಿ ಯಾವ್ದೇ ಕ್ಲಾಸ್‌ಲಿ ಎಡ್ಗದೆ ಹೈಸ್ಕೂಲಿಗೆ ಬಂದಿದ್ದೊ. ಇಷ್ಟರವರೆಗೆ ಒಟ್ಟೊಟ್ಟಿಗೆ ಆಡಿ ಬೆಳ್ದಿದ್ದ ಶ್ರುತಿಗೆ ಮುಂದೆನಂಗೆ ಕಿಶನ್‌ನೊಟ್ಟಿಗೆ ಇರಿಕೆ ಸಂಕೋಚ ಆಗ್ತಿತ್ತ್. ವಯಸ್ ಬೆಳ್ದಂಗೆ ಅವ್ಳು ಬಣ್ಣದ ಬದ್ಕ್‌ನತ್ತ ವಾಲ್ತ್. ಬಡತನ-ಸಿರಿತನತೇಳ್ವ ಭೇದ ತೋರ್‌ಸಿಕೆ ಶುರು ಮಾಡ್ತ್.

ಇದ್ರಂದ ನಿರಾಶನಾತ್ ಕಿಶನ್. ಬಡವ ಕಿಶನ್‌ನ ಗೆಳೆತನ ಅವ್ಳಿಗೆ ಹಿತ ಆತ್‌ಲೆ. ಆದರೆ ಹಿರಿಯವು ಯಾವುದೇ ಬದಲಾವಣೆ ಇಲ್ಲದೆ ಮುಂದೆನಂಗೇ ಇದ್ದೊ.

ಶ್ರುತಿಗೆ ಓದ್‌ಲಿ ಇದ್ದ ಆಸಕ್ತಿ ಕಮ್ಮಿಯಾಗಿತ್ತ್. ಆದರೆ ಕಿಶನಂಗೆ ಲಾಯ್ಕ

ಓದಿ ವಳ್ಳ ಚಾಕರಿಗೆ ಹೋಗಿ ಅಮ್ಮನ ಸುಖವಾಗಿಡಕುತೇಳ್ದು ಅವನ ಒಂದೇ ಉದ್ದೇಶ ಆಗಿತ್ತ್. ಅದ್ಕೆ ಅಂವ ಹಗ್‌ಲ್ ಇರ್‌ಳ್ ಕಷ್ಟ ಪಡ್‌ತಿತ್ತ್.

ಎಸ್.ಎಸ್.ಎಲ್.ಸಿ. ಪರೀಕ್ಷೆಲಿ ಕಿಶನ್ ನೂರಕ್ಕೆ ತೊಂಭತ್ತೆರಡ್ ಮಾರ್ಕ್ಸ್ ತೆಗ್ದ್ ಪಾಸಾದರೆ ಶ್ರುತಿ ಸೆಕೆಂಡ್ ಕ್ಲಾಸ್‌ಲಿ ಪಾಸಾಗಿತ್ತ್.

ನಂಜಪ್ಪನವು ನಿರ್ವಂಚನೆಂದ ಇಬ್ರುನೂ ಮಡಿಕೇರಿ ಕಾಲೇಜಿಗೆ ಸೇರಿಸಿದ್ದೊ. ಕಮಲ ತಾನ್ ಕೂಡ್ಸಿ ಮಡ್ಗಿದ್ದ ಪುಟ್ಟ ಗಂಟ್‌ನ ನಂಜಪ್ಪನವರ ಕೈಲಿ ಕೊಟ್ಟಿದ್ದೊ.

ಕಾಲೇಜ್‌ಲಿ ಕಿಶನ್‌ಗೆ, ಜಾಸ್ತಿ ಗೆಳೆಯರ್ ಇತ್ತ್‌ಲೆ. ಇದ್ದ ಕೆಲವು ಗೆಳೆಯರೂ ಬಡವರೇ ಆಗಿದ್ದೊ. ಕಾಲೇಜ್‌ಲಿ ಬಡತನ ಸಿರಿತನಗಳ ಮೇಳವೇ ನಡ್ದಿತ್ತ್.

ಶ್ರೀಮಂತ ವರ್ಗದವು ಕೇವಲ ಟೈಮ್‌ಪಾಸ್‌ಗಾಗಿ ಕಾಲೇಜಿಗೆ ಬರ್ತಿದ್ದೊ. ಅಪ್ಪಂದ್‌ರ್ ಕೂಡ್ಸಿ ಮಡ್ಗಿದ್ದ ಗಂಟ್‌ನ ಕರ್‌ಗ್ಸುದೇ ಅವರ ಉದ್ದೇಶವಾಗಿತ್ತ್.

ಹಣಂದನೇ, ಅವು ಡಿಗ್ರಿನ ಕೊಂಡ್‌ಕೊಂಬತಿದ್ದೊ. ಹಿಂದಿನವ್ಕೆ ಶಾಲೆ-ಕಾಲೇಜ್‌ತೇಳ್ರೆ ಅದೊಂದು ದೇವಸ್ಥಾನತೇಳ್ವಂಗೆ ಕಾಂಬತಿದ್ದೊ. ಆದರೆ ಇಂದ್! ಅದೊಂದು ಡಿಗ್ರಿ ನೀಡ್ವ ಯಂತ್ರ. ಇಲ್ಲಿ ಸ್ವಾಭಿಮಾನಕ್ಕೆ ನೆಲೆ ಇಲ್ಲೆ. ಪ್ರಾಮಾಣಿಕತೆಗೆ ಬೆಲೆ ಇಲ್ಲೆ. ಆಡ್ದೇ ಆಟ ಹೇಳ್ದೇ ವೇದ ವಾಕ್ಯ. ಲೆಕ್ಚರರ್‌ಗಳ ಜುಟ್ಟು ವಿದ್ಯಾರ್ಥಿಗಳ ಕೈಯಿಲಿ.

ಇಂತಹ ಪರಿಸ್ಥಿತಿಲಿ ನಡ್ದ ಒಂದ್ ಗಲಾಟೆಲಿ ವಿದ್ಯಾರ್ಥಿ ವೃಂದ ಎರ್ಡ್ ಹೋಳಾಗಿ ವಡ್ತ್.

ಒಂದ್ ಅಹಿಂಸಾ ಪ್ರತಿಪಾದಕರ್ದ್. ಇದ್ಕೆ ನಾಯಕ ಕಿಶನ್. ಇನ್ನೊಂದ್ ಗುಂಪಿಗೆ ಹಿಂಸೆಯೇ ಪ್ರಿಯ. ಅದಕ್ಕೆ ನಾಯಕ ಮಧುಕರ್. ಮಧುಕರ್ ಶ್ರೀಮಂತ ಹಂಗೇ ಗರ್ವಿಷ್ಟ ವ್ಯಕ್ತಿಯಾಗಿತ್ತ್.

ಹಿಪ್ಪಿ ತಲೆ, ಕಪ್ಪು ಕನ್ನಡ್‌ಕ, ದೊಡ್ಡ ಮೀಸೆ ಬುಟ್ಟ್ ಬಾಯಿಲಿ ಯಾಗೋಳು ಚುಯಿಂಗಮ್ ಅಗ್ದ್‌ಕಂಡ್ ಸಿನಿಮಾದ ವಿಲನ್‌ನಂಗೆ ಕಾಣ್ವ ಮಧುಕರತೇಳ್ರೆ ಒಂದು ಕೆಟ್ಟ ಸ್ವಪ್ನ ಒಳ್ಳೆಯವ್ರ ಪಾಲಿಗೆ.

ಅಂವನ ಕೈಂದ ಸಿಕ್ಕ್‌ತಿದ್ದ ತಿಂಡಿ-ತೀರ್ಥಗಳಿಗೆ ಒಂದ್ ಹಿಂಡೇ ಅಂವನ ಹಿಂದೆ ಸುತ್ತುತಿದ್ದೊ.

ಪರಸ್ಪರ ತದ್ವಿರುದ್ಧ ಅಭಿಪ್ರಾಯ ಇದ್ದ ಎರ್ಡ್ ಗುಂಪುಗಳ ನಡುಲಿ. ಆಗಾಗ ಘರ್ಷಣೆ ಆಗ್‌ತಿತ್ತ್.

ಆದರೆ ಕಿಶನ್‌ನ ಮನ್ಸ್‌ನ ಕಲ್ಕಿದ ವಿಷ್ಯತೇಳ್ರೆ ಶ್ರುತಿ ಮಧುಕರನ ಗೆಳೆತನ ಬೆಳ್ಸಿದ್. ಶ್ರುತಿಗೆ ಕಿಶನ್‌ತೇಳ್ರೆ ತಿರಸ್ಕಾರ. ತಮ್ಮ ಮನೆ ಕೆಲ್ಸದವನಂಗೆ ಅಂವನ ಕಾಂಬತಿತ್ತ್. ಕಿಶನ್ ಒಮ್ಮೆ ಮಧುಕರನ ವಿಷ್ಯಲಿ ಎಚ್ಚರಿಕೆ ಹೇಳ್ಕನ ಶ್ರುತಿ ಕಿಶನ್‌ಗೇ ಅವಮಾನ ಮಾಡಿತ್ತ್. ಅಂದ್‌ಂದ ಕಿಶನ್ ಶ್ರುತಿನ ವಿಷ್ಯಲಿ ತಲೆ ಕೆಡ್ಸಿಕಂಬದ್ನ ಬುಟ್ಟ್‌ಬುಟ್ಟಿತ್ತ್.

* * * * *

ಅಂದ್ ಕಾಲೇಜ್‌ಡೇ ಸಮಾರಂಭ ಮುಗ್ಯಕನ ರಾತ್ರಿ ಆಗಿತ್ತ್. ಎಲ್ಲವು ಹೊರ್ರು ಹೋಗಿದ್ದರೂ, ಸ್ಟುಡೆಂಟ್ ಯೂನಿಯನ್ ಅಧ್ಯಕ್ಷ ಆಗಿದ್ರಂದ ಕಿಶನ್‌ಗೆ ಹೋಕೆ ಆಗಿತ್ತ್‌ಲೆ.

ಕಾಲೇಜ್‌ಂದ ಲಾಸ್ಟ್ ಬಸ್ಸ್‌ಲಿ ಸಿದ್ಧಾಪುರಕ್ಕೆ ಬಾತ್. ಸಿದ್ಧಾಪುರಂದ ಮನೆಗೆ ಎರ್ಡ್ ಮೈಲ್ ಇತ್ತ್. ಒಂದ್ ಮೈಲ್ ಅಲ್ಲೊಂದ್ ಇಲ್ಲೊಂದ್ ಮನೆ ಬುಟ್ರೆ ಮತ್ತೆ ಕಾಫಿ ತೋಟದ ಒಳಗೆ ನಡೆಯಕಾಗಿತ್ತ್.

ಬೆಳದಿಂಗಳ್ ಹರ್ಡಿತ್ತ್. ಕಿಶನ್ ಅವಸರಲಿ ಬರ್ತಾ ಇತ್ತ್. ಮನೆಗೆ ಇನ್ನೇನ್ ಅರ್ಧ ಮೈಲ್ ಉಟ್ಟ್‌ತೇಳ್ಕನ ಸ್ವಲ್ಪ ದೂರಲಿ ಒಬ್ಬ ಹೆಂಗ್ಸ್ ಓಡಿಕಂಡ್ ಬಾತಿತ್ತ್. ಹಿಂದೆಂದ ಎರ್ಡ್ ಹೈದಗ ಓಡ್ಸಿಕಂಡ್ ಬಾತಿದ್ದೊ.

ಕಿಶನ್ ಓಡಿಕಂಡ್ ಆ ಹೆಂಗ್ಸ್‌ನ ಹತ್ರಕ್ಕೆ ಹೋತ್. ಶ್ರುತಿನ ಕಂಡ್ ಬೆಚ್ಚಿ ಬೀತ್. ಒಟ್ಟಿಗೆ ತಾನ್ ಸರಿಯಾದ ಸಮೆಲಿ ಬಂದೆತೇಳ್ವ ಕುಷಿನೂ ಆತ್.

ಅಷ್ಟೊತ್ತಿಗೆ ಓಡಿಕಂಡ್ ಬಂದ ಮಧುಕರ ಮತ್ತೆ ಅವನ ಗೆಳೆಯ ಪ್ರಸಾದ್‌ನ ಕಂಡ್ ರೋಷಲಿ ಹಲ್ಲ್ ಕಚ್ಚಿತ್.

"ಶ್ರುತಿ, ನೀನ್ ಯಾಕೆ ಇವರೊಟ್ಟಿಗೆ ಬಂದ"

"ಇಲ್ಲೆ, ನಾನ್ ಬಸ್ಸ್‌ಲೇ ಬಂದೆ, ಇವು ನನ್ನ ಫಾಲೋ ಮಾಡ್ಕಂಡ್ ಬಂದೊತ ಕಂಡದೆ, ನಾನ್ ಅರ್ಧ ದಾರಿಲಿ ಹೋಕನ ಮುಂದೆಂದ ಇವು ಬರ್ತಿದ್ದೊ, ನಂಗಿಂತ ಮುಂದೆ ಬಂದಿದ್ದೋತ ಕಂಡದೆ. ನಾನ್ ತೋಟದೊಳಗೆ ಓಡಿ ಓಡಿ ತಪ್ಸಿಕಂಡ್ ಇಷ್ಟ್ ಹೊತ್ತ್ ಆತ್. ನೀನ್ ದೇವ್ರಂಗೆ ಬಂದ"ತೇಳಿ ಕಿಶನ್‌ನ ತಬ್ಬಿಕಣ್ತ್.

ಮಧುಕರ ಶ್ರುತಿನ ಹತ್ರಕ್ಕೆ ಹೋತ್. ಶ್ರುತಿ "ಕಿಶನ್..."ತೇಳಿ ಕಿರ್ಚಿತ್.

ಕಿಶನ್ ಮಧುಕರನ ದವಡೆಗೆ ಬಾರ್ಸಿ, ಹೊಟ್ಟೆಗೆ ಜಾಡ್ಸಿ ವದ್ದತ್. ಮಧುಕರ

ಒಮ್ಮೆ ತತ್ತರ್ಸಿತ್. ಒಟ್ಟಿಗೆ ಇದ್ದ ಪ್ರಸಾದ್ ಅವನ ಸಹಾಯಕ್ಕೆ ಹೋತ್. ಮೂರು ಜನ್ರ ಮದ್ಯೆ ಹೊಡ್ದಾಟ ನಡ್ತ್. ಶ್ರುತಿ ಮೂಕಳಾಗಿ ನೋಡಿಕಂಡ್ ನಿತ್ತಿತ್. ಅವ್ಳಿಗೆ ಏನು ಮಾಡ್ದುತ ಗೊತ್ತಾತ್‌ಲೆ.

ಕಿಶನ್ ಬಾರದಿದ್ದಿದ್ದರೆ ತನ್ನ ಸ್ಥಿತಿ ಎಂತಾಗ್‌ತಿತ್ತೋತ ನೆನ್ಸಿ ಶ್ರುತಿಗೆ ಶಾಕ್ ಹೊಡ್ದಂಗೆ ಆಗಿತ್ತ್.

ಕಿಶನ್ ಒಬ್ಬನೇ ಆದರೂ ಶಕ್ತಿ ಮೀರಿ ಹೋರಾಡ್ತ್. ಇನ್ನೇನ್ ಅಂವ ಕೆಳಗೆ ಉರುಳಕುತೇಳುವಸ್ಟ್ ಹೊತ್ತಿಗೆ ಎದ್ರ್‌ಂದ ಬಂದ ಕಾರ್‌ನ ಕಂಡ್ ಮಧುಕರ್ ಮತ್ತೆ ಪ್ರಸಾದ್ ಪರಾರಿಯಾದೊ.

ಸುಸ್ತಾಗಿದ್ದ ಕಿಶನ್ ಅಲ್ಲೆ ಕುಸ್ದ್ ಬೀತ್. ಶ್ರುತಿಗೆ ಎಂತ ಮಾಡ್ದುತ ಗೊತ್ತಾಗದೆ ಚಡಪಡಿಸ್‌ತಿತ್ತ್. ಕಾರ್ ಇವ್ರ ಹತ್ರಲೇ ಬಂದ್ ನಿಲ್ಲ್‌ಕನ ಶ್ರುತಿ ತಮ್ಮ ಕಾರ್‌ನ ಗುರ್ತಿಸಿತ್. ಇವ್ರ ಕರ್ಕಂಡ್ ಬಾಕೆ ಹೊರ್ಟ ನಂಜಪ್ಪನವು ಕಾರ್ ರಿಪೇರಿ ಆದ್ರಂದ ಅವು ಬಾಕೆ ತಡ ಆಗಿತ್ತ್. ಕಾರು ಬಾರದಿರ್ಕನ ಶ್ರುತಿ ಬಸ್ಸ್ ಹತ್ತಿ ಬಂದಿತ್ತ್.

ಕಾರ್‌ಂದ ಇಳ್ದ ನಂಜಪ್ಪನವು ಗಾಬರಿಲಿ ಓಡಿ ಬಂದೊ. ವಿಷಯ ತಿಳ್ದ ಅವು ತಡಮಾಡದೆ ಕಿಶನ್‌ನ ಕರ್ಕಂಡ್ ಹೋಗಿ ಆಸ್ಪತ್ರೆಗೆ ಸೇರ್ಸಿದೊ. ನಂಜಪ್ಪನವ್ರ ಪ್ರಭಾವಂದ ಪೋಲೀಸರ್ ಮಧುಕರ್ ಮತ್ತೆ ಪ್ರಸಾದನ ಅರೆಸ್ಟ್ ಮಾಡಿ ಸರಿಯಾಗಿ ವದೆ ಕೊಟ್ಟಿದ್ದೊ. ಕೇಸ್ ದಾಖಲಾಗಿತ್ತ್.

ಇದ್ರಂದಾಗಿ ಮಧುಕರ್ ಮತ್ತೆ ಪ್ರಸಾದ್‌ನಲ್ಲಿ ಸೇಡ್‌ನ ಕಿಡಿ ಹೊತ್ತಿತ್ತ್. ಅವಿಬ್ಬರೂ ಸರಿಯಾದ ಸಮಯಕ್ಕಾಗಿ ಹಲ್ಲು ಕಚ್ಚಿ ಕಾದ್‌ಕೊಂಡಿದ್ದೊ.

ಆಸ್ಪತ್ರೆಲಿ ಕಿಶನ್ ಎರ್ಡ್ ದಿನ ಇತ್ತ್. ಶ್ರುತಿನೇ ಕಿಶನ್‌ನೊಟ್ಟಿಗೆ ಇದ್ದ್ ಅಂವನ ಉಪಚಾರ ಮಾಡ್ತ್. ಅವ್ಳಿಗೆ ಕಿಶನ್‌ನೊಟ್ಟಿಗೆ ಇದ್ದ ಹಿಂದೆನ ವರ್ತನೆಗೆ ಪಶ್ಚಾತ್ತಾಪ ಆಗಿತ್ತ್. ಅಂದ್ ತನ್ನ ಜೀವದ ಹಂಗ್ ತೊರ್‌ದ್ ತನ್ನ ಶೀಲ ಕಾಪಾಡ್ದ ದೇವರ್‌ತ ಅವ್ಳು ಕಿಶನ್‌ಗೆ ಮನಸ್‌ಲೇ ನಮಸ್ಕಾರ ಮಾಡ್ತ್.

* * * * *

ವರ್ಷಗ ಉರುಳಿ ಹೋಗಿದ್ದೊ. ಕಿಶನ್‌ನ ಓದ್ ಮುಗ್ದ್ ಅಂವಂಗೆ ಬ್ಯಾಂಕೊಂದರ್ಲಿ ಚಾಕರಿ ಸಿಕ್ಕಿತ್ತ್. ನಂಜಪ್ಪನವು ತಮ್ಮ ಮಗಳ್ ಶ್ರುತಿನ ಕಿಶನ್‌ಗೆ ಕೊಟ್ಟ್ ಮದ್ವೆ ಮಾಡಿದ್ದೊ.

ಕಿಶನ್-ಶ್ರುತಿನ ಜೀವ್ನ ಸುಖವಾಗಿ ನಡ್ದಿತ್ತ್. ಹಾಲ್‌ಜೇನ್‌ನಂಗೆ ಬೆರ್‌ತ್

ಜೀವ್ನ ಮಧುರವಾಗಿತ್ತ್. ಕಮಲ ತಮ್ಮ ಮಂಜನೊಟ್ಟಿಗೆ ಆರಾಮಾಗಿ ನೆಲ್ಸಿದ್ದೊ.

ಮತ್ತೆ ಒಂದೆರಡ್ ವರ್ಷಲಿ ಕಿಶನ್‌ಗೆ ಬ್ಯಾರೆ ಊರಿಗೆ ವರ್ಗ ಆಗಿತ್ತ್. ಕಮಲ ಮತ್ತೆ ಶ್ರುತಿನ ಒಟ್ಟಿಗೆ ಕರ್‍ಕೊಂಡ್ ಹೋಗಿತ್ತ್ ಕಿಶನ್. ಶ್ರುತಿ ಆಗಾಗ ತವುರು ಮನೆಗೆ ಬಂದ್ ಹೋಗಿ ಮಾಡ್ತಿತ್ತ್. ಅವ್ಳ ತವುರ್‌ಲಿ ಸಹ ಅವ್ಳ ಬುಟ್ರೆ ಬ್ಯಾರೆ ಮಕ್ಕ ಇತ್ತ್‌ಲೆ. ಹಂಗಾಗಿ ಅಪ್ಪ ಅವ್ವನ ನೋಡಿಕಂಬ ಜವಾಬ್ದಾರಿ ಅವ್ಳಿಗೆ ಇತ್ತ್.

ಕಿಶನ್ ಫೀಲ್ಡ್ ಆಫೀಸರ್ ಆಗಿದ್ರಂದ ಕೆಲವು ಸಲ ಮನೆಗೆ ಬಾಕೆ ಆಗ್‌ತಿತ್ಲೆ. ರಜಾ ದಿನಗಳ್‌ಲಿ ಮಾತ್ರ ಇಬ್ಬರೂ ಹೊರಗೆ ಸುತ್ತಾಡಿಕೆ ಹೋಗ್‌ತಿದ್ದೊ.

ಒಂದ್ ಐತ್‌ವಾರ ಮಾರ್ಕೆಟ್‌ಲಿ ತರಕಾರಿ ತೆಗ್ದ್‌ಕಂಡ್ ಇರ್ಕನ ಎದ್ರ ಅಂಗಡಿಲಿ ನಿತ್ತಿದ್ದ ವ್ಯಕ್ತಿಗಳ್ನ ಕಂಡ್ ದೆವ್ವನ ಕಂಡಂಗೆ ಬೆಚ್ಚಿ ಬೀತ್ ಶ್ರುತಿ. ಬಾಳ ವರ್ಷಗಳ ಮ್ಯಾಲೆ ಕಂಡ ಮಧುಕರನ ಕಣ್ಣ್‌ನ ದೃಷ್ಟಿಗೆ ಅವ್ಳು ತತ್ತರಿಸಿ ಹೋತ್. ಕಿಶನ್ ಉದಾಸೀನಂದ ಮುಂದೆ ನಡ್ಯಕನ ಶ್ರುತಿ ಅವನೊಟ್ಟಿಗೆ ಸರಸರತ ಹೆಜ್ಜೆ ಹಾಕಿತ್. ದಿನಕ್ಕೆ ಮುಟ್ಟ ಅವನ ಆ ಕಣ್ಣ್‌ನ ದೃಷ್ಟಿ ಅವ್ಳ ನೆನಪ್‌ನ ಆಳಲಿ ಕುತ್ತುತ್ತಿದ್ದರೂ ಮತ್ತೆ ದಿನ ಕಳ್ದಂಗೆ ಅದ್ ಮರ್‍ತ್ ಹೋತ್.

* * * * *

ಅಂದ್ ಕಿಶನ್ ಸಾಲ ವಸೂಲಾತಿಗಾಗಿ ಬ್ಯಾಂಕ್‌ಂದ ಫೀಲ್ಡ್‌ಗೆ ಹೋನೆತ ತಿಳ್ಸಿತ್ತ್. ಕಿಶನ್ ಹೋಗಿ ಅರ್ಧ ಗಂಟೆಲಿ ಫೋನ್ ಬಾಕನ ಕಿಶನ್ ಎಂತದೊ ಮರುತ್ಟ್ಟೇನೋತ ಹೇಳ್ಕಂಡ್ ಫೋನ್ ರಿಸೀವ್ ಮಾಡ್ತ್.

ಅತ್ತಂದ ಬ್ಯಾರೆ ಯಾರ್‍ದೊ ಸ್ವರ ಕೇಳ್ಕನ ಗಾಬರಿ ಆತ್.

"ಹಲೋ, ಮೇಡಂ ನಾನ್ ಡ್ರೈವರ್ ರಾಜುಂತ. ಸಿದ್ಧಾಪುರಂದ ಮಾತಾಡ್ತಾ ಇರ್‍ದು. ಯಜ್‌ಮಾನ್ರ್ ನಿಮ್ಗೆ ಫೋನ್ ಮಾಡಿಕೆ ಹೇಳಿ ನಂಬರ್ ಕೊಟ್ಟೊಳೊ"

"ರಾಜುನಾ ನೀನ್ ಯಾರ್"

"ನಾನ್ ಹೊಸ ಡ್ರೈವರ್  ಈಗಾಗಿ ಕೆಲ್ಸಕ್ಕೆ ಸೇರಿವಳೆ. ನಿಮ್ಮ ಅಮ್ಮಂಗೆ ಉಸಾರಿಲ್ಲೆ ಯಜ್‌ಮಾನ್ರೆ, ಅವುನ್ನ ಆಸ್ಪತ್ರೆಗೆ ಸೇರ್‍ಸಿವಳೊ. ಅವು ಡಾಕ್ಟ್ರ ಹತ್ರ ಹೋಗೊಳೊ. ನಿಮ್ಗೆ ತಿಳ್ಸಿಕೆ ಹೇಳ್ದೊ. ನೀವ್ ಸಿದ್ಧಾಪುರಕ್ಕೆ ಬಂದ್ ಫೋನ್ ಮಾಡ್ರೆ ನಾನ್ ಕರ್‍ಕಂಡ್ ಹೋನೆ"ತ ಹೇಳ್ತ್.

ಶ್ರುತಿಗೆ ಬಾಳಾ ಗಾಬರಿ ಆತ್. ಅವ್ಳ ಎದೆ ಬಡ್ತ ಜಾಸ್ತಿ ಆತ್. ಅವ್ಳಿಗೆ ಏನ್ ಮಾಡ್ದುತ ಗೊತ್ತಾತ್‌ಲೆ.

ಕಿಶನ್‌ನ ಮೊಬೈಲ್‌ಗೆ ಫೋನ್ ಮಾಡ್ತ್. ಕಿಶನ್ ಫೀಲ್ಡ್‌ಗೆ ಹೋಗಿ ಬುಟ್ಟಿತ್ತ್.

"ಶ್ರುತಿ ಗಾಬರಿ ಆಗ್ಬಡ. ನಾನ ಸ್ವಲ್ಪ ದೂರಲಿ ವಳೆ. ನೀನ್ ಬೇಗ ಹೊರ್ಟು ಹೋಗಿ ಅಲ್ಲಿಂದ ಎಂತ ವಿಷ್ಯತ ಫೋನ್ ಮಾಡ್. ಅಗತ್ಯ ಇದ್ದರೆ ನಾನ್ ತಕ್ಷಣ ಬನ್ನೆ"ತ ಹೇಳ್ತ್.

ಶ್ರುತಿ ಅತ್ತೆಗೆ ಹೇಳಿ ಒಂದೆರಡ್ ಬಟ್ಟೆ ಬ್ಯಾಗಿಗೆ ಹಾಕಿಕಂಡ್ ಬಸ್ಸ್ ಸ್ಟ್ಯಾಂಡಿಗೆ ಬಾತ್. ಹೊರ್ಟ್ ನಿತ್ತಿದ್ದ ಬಸ್ಸಿಗೆ ಹತ್ತಿ ಕುದ್ದ್ ಕಾರ್ ಡ್ರೈವರ್‌ಗೆ ಫೋನ್ ಮಾಡ್ತ್.

ಊರಿಗೆ ಬಂದ್ ಬಸ್ಸ್ ಇಳಿಯಕನ ಯಾರೂ ಕಂಡತ್‌ಲೆ. ಅಪ್ಪಂಗೆ ಫೋನ್ ಮಾಡ್ರೆ ಸ್ವಿಚ್ ಆಫ್ ಬಾತ್. ಅವ್ಳಿಗೆ ಗಾಬರಿ ಆತ್. ಕತ್ತಲೆ ಬ್ಯಾರೆ ಆಗಿತ್ತ್. ಮನ್ಸಿಗೆ ನೂರೆಂಟ್ ಗ್ಯಾನಗ ಬಂದ್ ಹೋದೊ.

ಅಮ್ಮಂಗೆ ಏನಾರ ಆತ. ಅಪ್ಪ ಯಾಕೆ ಫೋನ್ ತಕಣ್‌ತ್‌ಲೆ. ಡ್ರೈವರ್ ಬ್ಯಾರೆ ಕಾಂಬಲೆ. ಹೊಸ ಡ್ರೈವರ್‌ತೇಳ್ತ್. ಅವನ ಹೆಂಗೆ ನಂಗೆ ಗೊತ್ತಾದೆ. ನಾನ್ ಅರ್ಜೆಂಟ್‌ಲಿ ಯಾವ ಆಸ್ಪತ್ರೆತ ಕೇಳ್ತ್‌ಲೆ. ಅವ್ಳಿಗೆ ಹೆದ್ರಿಕೆ ಆತ್. ಹಿಂದೆ ಮುಂದೆ ಗ್ಯಾನ ಮಾಡದೆ ಹೊರ್ಟ್ ಬಂದಾಗಿತ್ತ್.

ಅಮ್ಮ ಮನೆಲಿ ಇರ್ದ್ಲೊ ಇಲ್ಯೊ ನೋಡನ ಯಾವ್ದಕ್ಕೂ ಮನೆಗೆ ಪೋಯಿತ ಗ್ಯಾನ ಮಾಡ್ತ್. ಮತ್ತೆ ಅಪ್ಪಂಗೆ ಫೋನ್ ಮಾಡ್ರೆ ಸ್ವಿಚ್ ಆಫ್ ಬಾತ್. ಟ್ಯಾಕ್ಸಿ ಮಾಡಿಕಂಡ್ ಪೋಯಿತ ಗ್ಯಾನ ಮಾಡಿ ಟ್ಯಾಕ್ಸಿನ ಕರ್ತ್.

ಅಷ್ಟೊತ್ತಿಗೆ ಅವ್ಳ ಹತ್ರಲೇ ಒಂದ್ ಕಾರ್ ಬಂದ್ ನಿತ್ತತ್. ಕಾರ್‌ಲಿ ಇದ್ದ ವ್ಯಕ್ತಿ ಇವ್ಳ ಮಾತಾಡ್ಸಕನ ಅವ್ಳಿಗೆ ಸ್ವಲ್ಪ ಧೈರ್ಯ ಬಾತ್.

"ನೀವು ಶ್ರುತಿ ಅಮ್ಮ ಅಲ್ಲಾ"

"ಹೌದು..."

"ನಾನ್ ಕಾರ್ ಡ್ರೈವರ್ ರಾಜು. ಸ್ವಲ್ಪ ತಡ ಆಗೋತು ಯಜ್‌ಮಾನ್ರ ಮತ್ತೆ ಅಮ್ಮನ ಈಗ ಮನೆಗೆ ಬುಟ್ಟ್ ಬಂದೆ. ಬನ್ನಿ ಮನೆಗೆ ಪೋಯಿತ" ಕರ್ತ್.

"ಇದ್ ಯಾವ ಕಾರ್. ನಮ್ಮ ಕಾರ್ ಅಲ್ಲ ಅಲಾ"

"ಕಾರ್‌ನ ಸರ್ವಿಸ್‌ಗೆ ಬುಟ್ಟೊಳೊ. ಇದ್ ನನ್ನ ಟ್ಯಾಕ್ಸಿ"

"ಮತ್ತೆ ಅಪ್ಪ ಫೋನ್ ಮಾಡ್ರೆ ತೆಗ್ತ್‌ಲೆ"

ಯಜಮಾನ್ರ ಫೋನ್ ಚಾರ್ಜ್ ಇಲ್ಲದೆ ಸ್ವಿಚ್ ಆಫ್ ಆಗುಟ್ಟು. ಇಲ್ಲಿ ಮಳೆ ಗಾಳಿಂದಾಗಿ ಎರ್ಡ್ ದಿನಂದ ಕರೆಂಟ್ ಇಲ್ಲೆ. ಇಂದ್ ಮಳೆ ಬುಟ್ಟುಟ್ಟು ಅಷ್ಟೆ.

"ಸರಿ"

ಶ್ರುತಿನ ಬ್ಯಾಗ್‌ನ ಕೇಳಿಕಂಡ್ ಡ್ರೈವರ್ ಕಾರ್‌ಲಿ ಇಸಿತ್. ಶ್ರುತಿಗೆ ಯಾಕೋ ಏನೊ ಸರಿ ಇಲ್ಲೆತ ಅನ್ನಿಕೆ ಶುರು ಆತ್.

ಕಾರ್ ಮನೆ ಕಡೆ ಹೊರ್ಟತ್. ಸುಮಾರ್ ಒಂದ್ ಮೈಲು ಹೋಕನ ದಾರಿಲಿ ಕಂಡ ಎರ್ಡ್ ಜನದ ಹತ್ರ ಕಾರ್ ನಿತ್ತತ್.

ಆ ಎರ್ಡ್ ಜನನ ಕಂಡ್ ಶ್ರುತಿ ಹೆದ್ರಿ ಕಿರ್ಚಿತ್. ಡ್ರೈವರ್‌ಗೆ ಕಾರ್ ನಿಲ್ಸತ ಹೇಳ್ತ್. ಆದರೆ ಡ್ರೈವರ್‌ಂದ ಯಾವುದೇ ಪ್ರತಿಕ್ರಿಯೆ ಬಾತ್‌ಲೆ.

ಆ ಇಬ್ಬರೂ ಮುಂದೆನ ಸೀಟ್‌ಲಿ ಕಷ್ಟಲಿ ಕುದ್ದಿದ್ದೊ. ಶ್ರುತಿ ಹಿಂದೆನ ಸೀಟ್‌ಲಿ ಕುದ್ದಿತ್ತ್. ಅವ್ಳ ಮುಖಂದ ಬೆವರ್ ಇಳಿಯತಿತ್ತ್.

ಸ್ವಲ್ಪ ಮುಂದೆ ಹೋಕನ ಕಾರ್‌ನ ದಾರಿ ಬದಲಾತ್ತ್. ಶ್ರುತಿ ಡ್ರೈವರ್‌ನ ಕೇಳ್ಕನ ಮುಂದೆ ಕುದ್ದಿದ್ದವ್ರಂದ ಬಾತ್ ಅಟ್ಟಹಾಸದ ನಗೆ.

ಮುಂದೆ ಕುದ್ದಿದ್ದಂವ ತನ್ನ ಜೋಬುಂದ ಕೈ ವಸ್ತ್ರ ತೆಗ್ದ್ ಶ್ರುತಿನ ಹತ್ರ ಬಗ್ಗ್‌ಕನ ಶ್ರುತಿ ಹೆದ್ರಿ ಕಿರ್ಚಿತ್. ಕ್ಷಣಲಿ ಅವ್ಳ ಸ್ವಯ ತಪ್ಪಿ ಕಾರ್‌ನ ಸೀಟಿಗೆ ವರ್ಗಿತ್.

* * * * *

ಬ್ಯಾಂಕ್‌ಲಿ ಅಕೌಂಟ್ಸ್ ಮಾಡಿಕಂಡ್ ಕುದ್ದಿದ್ದ ಕಿಶನ್ ಫೋನ್ ಕಾಲ್ ಬಾಕನ ಬಹುಶಃ ಅತ್ತೆಗೇನಾರ ಆತೇನೊ ಅದ್ಕೆ ಶ್ರುತಿ ಇಲ್ಲರೆ ಮಾವ ಫೋನ್ ಮಾಡಿರೊತ ಗ್ಯಾನ ಮಾಡಿ ಫೋನ್ ತಕಣ್ತ್.

ಅತ್ತಂದ ಯಾವ್ದೋ ಅಪರಿಚಿತ ಸ್ವರ ಕೇಳಿ ಆಶ್ಚರ್ಯ ಆತ್.

"ಏನ್ ಮರಿ ಶ್ರುತಿತ ಗ್ಯಾನ ಮಾಡ್ದ. ನಿನ್ನ ಶ್ರುತಿ ಈಗ ನನ್ನ ಹತ್ರ ಉಟ್ಟು. ಈಗ ನಿನ್ನ ಆಟ ತೋರ್ಸು ನೋಡನ. ಪೊಲೀಸ್‌ಗೆ ಏನಾರ ತಿಳ್ಸಿರೆ ನೀನ್ ಶ್ರುತಿನ ಹೆಣ ಕಾಂಬಕಾದೆ. ನೀನ್ ಅವ್ಳ ಕಾಣೋಕುತಾದರೆ ನಾಳೆ ಬೆಳಿಗ್ಗೆ 10.00 ಗಂಟೆಗೆ "ಬೆಟ್ಟದ ಮನೆಗೆ" ಬಾ ತೇಳಿ ಮುಂದೆ ಮಾತಿಗೆ ಅವಕಾಶ ಕೊಡದೆ ಫೋನ್ ಕಟ್ಟ್ ಮಾಡ್ತ್.

ಕಿಶನ್ ಹುಚ್ಚನಂಗೆ ಆಗಿತ್ತ್. ಆಗಲೇ ರಜೆ ಬರ್ದ್ ಮನೆಗೆ ಓಡ್ತ್.

"ಅಯ್ಯೋ ಶ್ರುತಿ"ತ ಅಂವನ ಮನ್ಸ್ ಮರ್ಡ್ತಿತ್ತ್.

"ಬೆಟ್ಟದ ಮನೆ"ತ ಕೇಳ್ಕನ ಅಂವನ ಮೈ ರೋಷಂದ ಕೊದ್ದ್ ಹೋತ್. ಅದ್ ಅವಂಗೆ ಚಿರಪರಿಚಿತ ಹೆಸರ್. ಅಂವನ ಕಡುವೈರಿ ಮಧುಕರನ ಮನೆ ಅದ್.

ಬಸ್ಸ್‌ಂದ ಇಳ್ದ ಕಿಶನ್ ಸೀದಾ "ಬೆಟ್ಟದ ಮನೆ" ಕಡೆ ಓಡ್ತ್. ಸ್ವಲ್ಪ ದೂರ ಓಡ್ಕನ ಮುಂದೆಂದ ಬಂದ ಹಳ್ಳಿಯಂವ.

"ಯಾಕ್ಬುದ್ದಿ ಓಡ್ತೊಳ್ರಿ, ಅಲ್ಲಿ ಯಾರೋ ಬಿದ್ದೊಳೊ ನೋಡಿಕೆ ಓಡ್ತೊಳ್ರಿಯಾ"

"ಏನ್ ಯಾರೊ ಬಿದ್ದೊಳೊನಾ"

ಕಿಶನ್ ಅತ್ತ ಓಡ್ತ್. ಅವನ ಮನ್ಸ್‌ಲಿ ಶ್ರುತಿ ಸುಳಿದಾಡ್ತ್.

ಇಂವ ಅಲ್ಲಿಗೆ ಓಡ್ದಕು ಎದುರ್‌ಂದ ಪೊಲೀಸ್ ಜೀಪು ಬರೋದಿಕ್ಕು ಸರಿಯಾತ್. ಕಿಶನ್‌ಗೆ ಆಶ್ಚರ್ಯ ಆತ್. ಪೊಲೀಸ್ ಸಮವಸ್ತ್ರಲಿ ಇದ್ದ ಪ್ರಸಾದ್! ಒಟ್ಟಿಗೆ ಇದ್ದ ಮಧುಕರ್!!

ಮಧುಕರ ಪ್ರಸಾದನ ಕಡೆಗೆ ಕಣ್ಸನ್ನೆ ಮಾಡ್ತ್. ಪ್ರಸಾದ್ ಸಬ್ ಇನ್ಸ್‌ಪೆಕ್ಟರ್ ಗತ್ತ್‌ಂದ ಗದರ್ಸಿತ್. ಆ ವ್ಯಕ್ತಿನ ಕೊಲೆ ಮಾಡ್ದಕ್ಕಾಗಿ ನಿನ್ನ ಅರೆಸ್ಟ್ ಮಾಡ್ತಾವಳೆತೇಳ್ತ್. ಮುಂದೆನೇ ಮನಸ್‌ನ ಸ್ಥಿಮಿತ ಕಳ್ಕಂಡಿದ್ದ ಕಿಶನ್‌ನ ಕೈಯಿಂದ ಆ ವ್ಯಕ್ತಿಯ ಹೊಟ್ಟೆಗೆ ಹಾಕಿದ್ದ ಚಾಕುನ ಬಲಾತ್ಕಾರಂದ ತೆಗ್ಸಿದೊ.

ಕಿಶನ್ ತಾನ್ ನಿರಪರಾಧಿತ ಕಿರ್ಚಿಕೊಂಡರೂ ಕೇಳದೆ ಸ್ಟೇಷನ್ನಿಗೆ ಕರ್‍ಕೊಂಡ್ ಹೋದೊ. ಕಿಶನ್ ಏನೊಂದೂ ಅರ್ಥ ಆಗದೆ ದಿಗ್ಭ್ರಾಂತನಂಗೆ ಕುದ್ದಿತ್ತ್. ಅವನ ಸ್ಥಿತಿ ಕಟುಕನ ಕೈಗೆ ಸಿಕ್ಕಿದ ಕುರಿನಂಗೆ ಆಗಿತ್ತ್. ಇದ್ ಉದ್ದೇಶ ಪೂರ್ವಕವಾಗಿ ಬೀಸಿದ ಬಲೆತ ಅಂವಂಗೆ ತಿಳ್ದ್‌ಹೋತ್. ಆದರೆ ಅಂವ ನಿಸ್ಸಹಾಯಕ ಆಗಿತ್ತ್.

* * * * *

ಕೋರ್ಟ್‌ಲಿ ಕಿಶನ್ ಕೊಲೆ ಮಾಡ್ದುನ ತಾನ್ ನೋಡ್ದೆತ ಮಧುಕರ್ ಸಾಕ್ಷಿ ಹೇಳ್ತ್. ಚಾಕುನ ಮ್ಯಾಲೆ ಇದ್ದ ಕಿಶನ್‌ನ ಬೆರಳ ಗುರ್ತ್ ಅದ್‌ನ ಸಾಬೀತ್ ಪಡ್ಸಿತ್ತ್.

ಕಿಶನ್ ತನಿಗೆ ಏನೂ ಸಂಬಂಧ ಇಲ್ಲದಂಗೆ ನಿರ್ವಿಕಾರಂದ ನಿತ್ತಿತ್ತ್.

ನಂಜಪ್ಪನವು ಅಂವನ ಕೊಲೆ ಕೇಸಿಂದ ತಪ್ಪಿಕೆ ಬಾಳ ಪ್ರಯತ್ನ ಪಟ್ಟೊ. ಅವು ನೇಮಿಸಿದ್ದ ಪ್ರಸಿದ್ಧ ಲಾಯರ್‌ಂದಾಗಿ ಮತ್ತೆ ಅವನ ಸೌಜನ್ಯ ನಿಷ್ಕಳಂಕ ವರ್ತನೆಂದಾಗಿಯೊ ನ್ಯಾಯಧೀಶರ್ ಅಂವಂಗೆ ಏಳು ವರ್ಷಗಳ ಶಿಕ್ಷೆ ವಿಧಿಸಿದ್ದೊ. ಕಿಶನ್ ನಾಕ್ ಗೋಡೆಗಳೊಳಗೆ ಬಂದಿ ಆತ್.

* * * * *

ಮಧುಕರ ಕಿಶನ್‌ನ ಮ್ಯಾಲೆ ಸೇಡ್ ತೀರ್ಸಿಕಂಡಿತ್ತ್. ಅವನ ಕಡೆ ಡ್ರೈವರ್‌ನ ಹೆದರ್ಸಿ ಬೆದರ್ಸಿ ಶ್ರುತಿಗೆ ಫೋನ್ ಮಾಡ್ಸಿ ಅವ್ಳ ಕರ್ಸಿಕಂಡಿತ್ತ್. ಇದ್ಯಾವುದೂ ತಿಳಿಯದೆ ಶ್ರುತಿ ಹೊರ್ಟು ಬಂದಿತ್ತ್. ನಂಜಪ್ಪನವರ ಹೊಸ ಡ್ರೈವರ್ನ ಅವನೇ ಸೃಷ್ಟಿ ಮಾಡಿತ್ತ್. ತನ್ನ ಕಡೆಯವನಾದ ಡ್ರೈವರ್‌ಗೆ ಶ್ರುತಿನ ತನ್ನ ನೆಂಟತಿತ ಹೇಳಿ ಕರ್ಕಂಡ್ ಬಾಕೆ ಮಾಡಿತ್ತ್.

ಮಧುಕರ ಕಾರ್‌ಲಿ ಕೊಟ್ಟಿದ್ದ ಕ್ಲೋರೋಫಾರಂದಾಗಿ ದಿನ ಇಡೀ ಸ್ವಯ ಇಲ್ಲದೆ ಮಲ್ಗಿದ್ದ ಶ್ರುತಿನ ಕಂಡ್ ಡ್ರೈವರ್‌ಗೆ ಕ್ರಮೇಣ ಕರುಣೆ ಉಕ್ಕಿತ್. ಅವಂಗೆ ಅವಳ ವಯಸ್‌ನ ಮಗಳ್ ಇತ್ತ್. ಮಾರನೇ ದಿನ ಅವ್ಳಿಗೆ ಸ್ವಯ ಬಂದ್ ನರಳಾಡ್‌ಕ್ಕನ ತಾನೇ ಅವಳಿಗೆ ಉಪಚಾರ ಮಾಡ್ತ್. ಅವ್ಳಿಗೆ ಹಾಲು ಬಿಸ್ಕೆಟ್ ಕೊಟ್ಟತ್.

ನಿರ್ವಿಕಾರಂದ ಸಣ್ಣ ಕೂಸ್‌ನಂಗೆ ಕೊಟ್ಟದೆಲ್ಲಾ ತಿಂಬಕನ ಡ್ರೈವರ್‌ಗೆ ಕರುಣೆ ಉಕ್ಕಿ ಬಾತ್. ಮೆಲ್ಲೆ ಅವ್ಳ ತಲೆ ಸವ್ರಿತ್.

ಅಂವ ಸಂಸಾರಿಯೇ. ಗೊತ್ತಿಲ್ಲದೆ ಇವರ ಜಾಲಲಿ ಸಿಲುಕಿತ್ತ್. ಮಧುಕರನ ವಿಷ್ಯ ತಿಳ್ದಿತ್ತ್. ಅವನ ಬಗ್ಗೆ ಅಸಹ್ಯ ಹುಟ್ಟಿತ್ತ್. ಶ್ರುತಿಗೆ ಪೂರ ಎಚ್ಚರ ಆತ್. ಎದುರಿಗೆ ಇದ್ದ ಇವನ ಕೇಳ್ತ್

"ನೀನ್ ಯಾರ್."

"ನಿನ್ನ ಅಣ್ಣ"ತೇಳ್ತ್ ಅಂವ.

"ಅಣ್ಣ..."ತೇಳಿ ಮತ್ತೆ ಹೇಳ್‌ತ್ ಶ್ರುತಿ.

ಆಗಲೇ ಅವಳ ವಿಷ್ಯ ಎಲ್ಲಾ ತಿಳ್ಕಂಡಿದ್ದ ಅಂವ ಹೆಂಗಾರ ಮಾಡಿ ಮಧುಕರಂಗೆ ಗೊತ್ತಾಗದಂಗೆ ಅವ್ಳನ ಮನೆ ತಲ್ಪಿಸಕುತೇಳಿ ಮೆಲ್ಲೆ ಹೊರಗೆ ಕರ್ಕೊಂಡ್ ಹೋತ್.

ಮಧುಕರ ಪ್ರಸಾದನ ಜೀಪ್‌ಲಿ ಬೆಳಿಗ್ಗೆನೇ ಎಲ್ಲಿಗೋ ಹೋಗಿತ್ತ್. ಶ್ರುತಿನ ಎಚ್ಚರಲಿ ಕಾಯೋಕುತ ತಿಳ್ಸಿ ಹೋಗಿತ್ತ್.

ಮಧುಕರನ ಅಪ್ಪ-ಅಮ್ಮ ನಾಲ್ಕ್ ದಿನದ ಹಿಂದೆ ಮಗಳ ಮನೆ ಚೆನ್ನೈಗೆ ಹೋಗಿದ್ದೊ. ಅವು ಇದ್ದಿದರೆ ಈ ರೀತಿ ಆಗ್‌ತಿತ್ತ್‌ಲೆತ ಕಂಡದೆ.

ರಭಸಲಿ ಓಡ್ದ ಕಾರ್ ನಂಜಪ್ಪನವರ ಮನೆ ತಲ್ಪ್‌ಕನ ನಂಜಪ್ಪನವು ಮನೆಲಿ ಇತ್ತ್‌ಲೆ. ಕುಸುಮ ಕುರ್ಚಿಲಿ ಕುದ್ದಿದ್ದವು ಎದ್ದ್ ಬಂದೊ. ಶ್ರುತಿನ ಇಳ್ಸಿದ. ಡ್ರೈವರ್ ಬಂದ ರಭಸಲೇ ವಾಪಾಸ್ ಹೊರ್ಟು ಹೋತು.

ಕುಸುಮ "ಬಂದಾ ಶ್ರುತಿ. ಯಾಕೆ ಹಿಂಗೊಳ. ಉಸಾರಿಲ್ಲೆನಾ ಕಿಶನ್ ಎಲ್ಲಿ" ಒಂದೇ ಉಸುರಿಗೆ ಕೇಳ್ದೊ ಗಾಬರಿಲಿ.

ಶ್ರುತಿ ಅವರ್ನ ವಿಚಿತ್ರವಾಗಿ ನೋಡ್ತ್. ಮಾತಾಡ್‌ತ್ಲೆ. ಕುಸುಮ ಅವಳ್ನ ವಳಗೆ ಕರ್ಕೊಂಡೋಗಿ ಕೂರ್ಸಿದೊ.

ಅವ್ಕೆ ಹೆದ್ರಿಕೆ ಆತ್. ಶ್ರುತಿ ಯಾಕೆ ಬಾತ್? ಯಾರ್ ಕರ್ಕೊಂಡ್ ಬಂದೊ? ಒಂದೂ ಗೊತ್ತಾತ್ಲೆ.

ಸ್ವಲ್ಪ ಹೊತ್ತಿಗೆ ಬಂದ ನಂಜಪ್ಪನವು ವಿಷ್ಯ ತಿಳ್ದ್ ಗಾಬರಿಯಾದೊ. ಶ್ರುತಿಗೆ ಎಲ್ಲಾ ಮರ್ತ್ ಹೋಗಿತ್ತ್.

ನಂಜಪ್ಪನವು ತಡಮಾಡದೆ ಅವಳ್ನ ಡಾಕ್ಟರ ಹತ್ರ ಕರ್ಕೊಂಡ್ ಹೋದೊ. ಕಿಶನ್‌ನ ವಿಚಾರ್ಸಿರೆ ಅವ್ನ ಪತ್ತೆ ಇಲ್ಲವಾಗಿತ್ತ್.

ಮದ್ದ್, ಇಂಜೆಕ್ಷನ್‌ಂದ ಪ್ರಯೋಜನ ಆತ್‌ಲೆ. ಯಾವುದೊಂದು ತಿಳಿಯದೆ ಚಿಂತೆ ಶುರು ಆತ್.

ಡಾಕ್ಟರ್ ಅವಳ್ನ ಮನೋವೈದ್ಯರಲ್ಲಿಗೆ ಕರ್ಕೊಂಡ್ ಹೋಕೆ ತಿಳ್ಸಿದೊ. ಮನೋವೈದ್ಯರ್ ಅವಳ್ನ ಪರೀಕ್ಷೆ ಮಾಡಿ ಯಾವುದೋ ಒಂದು ಘಟನೆಂದ ಅವ್ಳ ಮೆದುಳಿಗೆ ಶಾಕ್ ಆಗುಟ್ಟುತ ತಮ್ಮ ಉಪಚಾರ ಶುರು ಮಾಡ್ದೊ.

* * * * *

ಶ್ರುತಿನ ಮನೆಗೆ ಬುಟ್ಟ್ ಬರುವ ಹೊತ್ತಿಗೆ ಮಧುಕರ್ ಶತಪಥ ಹಾಕ್‌ತಿತ್ತ್. ಡ್ರೈವರ್‌ನ ಕಂಡ್ ಅಂವನ ರೋಷ ಉಕ್ಕಿತ್.

ಅವನ ಕಾಂಬಕನೇ "ನನ್ನ ಉಪ್ಪು ಉಂಡ್, ನಂಗೆ ಮೋಸ ಮಾಡಿಯಾ"ತೇಳಿ ಜಾಡ್ಸಿ ಒದ್ದತ್.

ಡ್ರೈವರ್‌ನ ಸಹನೆ ತಪ್ಪಿತ್. ಒಂದ್ ಹೆಣ್ಣ್ ಮಗಳ್ನ ಕಾಪಾಡ್ದ ಕುಶಿ ಎಲ್ಲಾ ಹಾರಿ ಹೋತ್. ಕೈ ಕೈ ಮಿಲಾಯ್ಸಿತ್. ಮಧುಕರ ವಳಗೆ ಓಡ್ತ್. ಅಂವನ

ಹಿಂದೆ ಓಡ್ದ ಡ್ರೈವರ್ ಮರುಕ್ಷಣಲಿ "ಅಮ್ಮಾ"ತೇಳಿ ಕೆಳಗೆ ಉರ್ಳಿತ್.

ಮಧುಕರ ಅವನ ಹೊಟ್ಟೆಗೆ ಚಾಕುಲಿ ತಿವಿದಿತ್ತ್. ಅವನ ಹೆಣನ ಕಾರ್ ಡಿಕ್ಕಿಲಿ ಹಾಕಂಡ್ ಸ್ವಲ್ಪ ದೂರ ತಕೊಂಡ್ ಹೋಗಿ ಬಿಸಾಡಿ ಬಾತ್. ತನ್ನ ಗೆಳೆಯ ಪ್ರಸಾದ್ ಇನ್ಸ್‌ಪೆಕ್ಟರಾಗಿದ್ರಂದ ಅವನ ಕೆಲ್ಸಗಳೆಲ್ಲಾ ಸಲೀಸಾಗಿ ನಡೆಯತಿತ್ತ್.

ಪ್ರಸಾದನ ಬೆಂಬಲ ಅವಂಗೆ ಇತ್ತ್. ಅಲ್ಲದೆ ಪ್ರಸಾದಂಗೂ ಕಿಶನ್‌ನ ಮ್ಯಾಲೆ ಹಗೆ ಇದ್ರಂದ ಇಬ್ಬರೂ ಕೂಡಿ ರಚಿಸಿದ ಷಡ್ಯಂತ್ರಲಿ ಕಿಶನ್ ಸಿಲುಕಿ ನಲುಗಿ ಹೋಗಿತ್ತ್.

ನಂಜಪ್ಪನವ್ಕೆ ಪೊಲೀಸ್ ಸ್ಟೇಷನ್‌ಂದ ಕರೆ ಬಾಕನ ಗಾಬರಿಯಾತ್. ವಿಷ್ಯ ಎಂತತ ಗೊತ್ತಾತ್‌ಲೆ. ಅಲ್ಲಿ ಹೋದ ಮ್ಯಾಲೆ ವಿಷ್ಯ ತಿಳ್ದ್ ತಲೆ ಮ್ಯಾಲೆ ಆಕಾಶನೇ ಬಿದ್ದಂಗೆ ಆತ್.

ಒಂದ್ ಕಡೆ ಕೊಲೆ ಆಪಾದನೆಗೆ ಒಳಗಾದ ಅಳಿಯ ಇನ್ನೊಂದ್ ಕಡೆ ಮತಿಹೀನ ಮಗಳ್. ಪೂರ್ವ ಜನ್ಮದ ಕರ್ಮದ ಫಲತೇಳಿ ಅವು ರೋಧಿಸ್‌ತಿದ್ದೊ. ಅವು ಮಾಡ್ದ ಪ್ರಯತ್ನಗ ಎಲ್ಲಾ ವಿಫಲ ಆಗಿ ಕಿಶನ್ ಜೈಲ್ ಸೇರಿತ್ತ್. ಶ್ರುತಿಗೆ ಕಿಶನ್‌ನ ವಿಷ್ಯ ಹಂಗೆ ಕಿಶನ್‌ಗೆ ಶ್ರುತಿನ ವಿಷ್ಯ ತಿಳ್ಸಿತ್‌ಲೆ.

ಇದೇ ಕೊರಗ್‌ಲೇ ಕುಸುಮ ತೀರಿಕೊಂಡಿದ್ದೊ. ಕಮಲ ನಂಜಪ್ಪನವ್ರ ಮನೆಲಿ ಇದ್ದ್‌ಕಂಡ್ ಕಣ್ಣೀರ್‌ಲಿ ದಿನ ಕಳಿಯತಿದ್ದೊ. ಅವು ಹಾಕ್‌ತಿದ್ದ ಶಾಪ ಎದೆ ನಡುಗಿಸುವಂಗೆ ಇತ್ತ್.

ನಂಜಪ್ಪನವ್ಕೆ ಕಿಶನ್ ನಿರಪರಾಧಿತ ತಿಳ್ದಿದ್ದರೂ ಅದ್ಕೆ ಯಾವುದೇ ಸಾಕ್ಷಿ ಇತ್ತ್‌ಲೆ.

ಇನ್ನೊಂದ್ ಕಡೆ ಮಧುಕರ ಅಟ್ಟಹಾಸಲಿ ಮೆರಿಯತಿತ್ತ್. ಅವನ ಸೇಡ್ ಮುಗ್ದಂಗೆ ಕಾಂಬತಿತ್ಲೆ.

ಶ್ರುತಿನ ಮನಸ್ಥಿತಿಲಿ ಯಾವುದೇ ಬದಲಾವಣೆ ಕಾಂಬತಿಲ್ಲೆ.

ಕಿಶನ್-ಶ್ರುತಿ ಲಾಯ್ಕ ಇರ್ಕನ ಯಾಗೋಳೂ ಮನೆಂದ ಸ್ವಲ್ಪ ದೂರಲಿ ಇರ್ವ ಕೆರೆ ಹತ್ರ ಸಾಯಂಕಾಲದ ಹೊತ್ತು, ಕುದ್ದ್ ಕಾಲ ಕಳೆಯುತಿದ್ದೊ. ಶ್ರುತಿ ಈಗಲೂ ಎಷ್ಟೊ ಹೊತ್ತ್ ಶೂನ್ಯದತ್ತ ದೃಷ್ಟಿ ನೆಟ್ಟ್ ಕುದ್ದಿರ್‌ತಿತ್ತ್. ಕಡೆಗೆ ನಂಜಪ್ಪನವೊ, ಕಮಲನವೋ ಕರ್ಕಂಡ್ ಬಾಕಾಗಿತ್ತ್.

ಅಂದ್ ಕಿಶನ್‌ನ ಬಿಡುಗಡೆ ದಿನ. ನಂಜಪ್ಪನವು ಕಾರ್ ತಕಂಡ್ ಹೋಗಿದ್ದೊ. ಆದರೆ ಅವು ತಲ್ಪಿಕೆ ಮುಂದೆನೇ ಕಿಶನ್ ಹೊರ್ಟು ಹೋಗಿತ್ತ್. ನಿರಾಶೆಂದ

ನಂಜಪ್ಪನವು ಅವ್ನ ಹುಡ್ಕಿಕಂಡ್ ಹೊರ್‍ಟ್ವೊ.

ಕಿಶನ್ ಮನಸ್ ಬಂದ ಕಡೆ ಕಾಲೆಳೆದ್‌ಕಂಡ್ ನಡ್ದಿತ್ತ್. ಅವಂಗೆ ಗೊತ್ತು ಗುರಿ ಇಲ್ಲದಾಗಿತ್ತ್. ಶ್ರುತಿ ಸತ್ತು ಹೋಗುಟ್ಟುತ ಅಂವನ ನಂಬಿಕೆಯಾಗಿತ್ತ್. ಅಂವ ನಂಜಪ್ಪನವರ್‍ನ ಕೇಳ್ಕನ ಅವು ತಲೆ ಬಗ್ಗಿಸಿದ್ದೊ.

ರಸ್ತೆ ಬದಿಲಿ ನಡ್ಕಂಡ್ ಹೋಗ್‌ತ್ತಿದ್ದ ಕಿಶನ್ ಸಾಯಂಕಾಲದ ಹೊತ್ತಿಗೆ ಕೆರೆಯ ಕಡೆ ಯಾಂತ್ರಿಕತೆಂದ ನಡ್ದಿತ್ತ್.

ಅಂವನ ಕಡೆಗೆ ರಭಸಲಿ ಬೈಕೊಂದು ನುಗ್ಗಿ ಬಾಕನ ಅಂವ ಪಕ್ಕಕ್ಕೆ ಹಾರಿ ತಪ್ಪಿಸಿಕಣ್ತ್. ಬೈಕ್ ನೆಟ್ಟಂಗೆ ಹೋಗಿ ಮುಂದೆ ಇದ್ದ ಮರಕ್ಕೆ ಡಿಕ್ಕಿ ಹೊಡ್ದು ಕೆಳಗೆ ಉರ್‍ಳಿತ್. ಅದೇ ಸಮೆಲಿ ಎದುರಿಂದ ಬರ್‍ತಿದ್ದ ಹೆಂಗಸ್ ಜೋರಾಗಿ ಕಿರ್‍ಚಿ ಕೆಳಗೆ ಬೀಳ್ಕನ ಕಿಶನ್ ಅತ್ತ ಧಾವಿಸಿತ್. ಅವಂಗೆ ತನ್ನ ಕಣ್ಣ್‌ನ ತಾನೇ ನಂಬಿಕೆ ಆತ್ಲೆ.

"ಶ್ರುತಿ..."ತೇಳಿ ಓಡಿ ಅವಳ ಹತ್ರ ಹೋತ್. ಅವ್ಳಿಗೆ ಸ್ವಯ ಇತ್ತ್‌ಲೆ. ಪಕ್ಕದ ಕೆರೆಂದ ನೀರ್ ತಂದ್ ತಟ್ಟಿ ಉಪಚರಿಸಿತ್. ಸ್ವಲ್ಪ ಹೊತ್ತಿಗೆ ಅವ್ಳಿಗೆ ಎಚ್ಚರ ಆತ್.

"ನಾನ್ ಎಲ್ಲಿ ವಳೆ"ತೇಳಿ ಎದ್ದತ್. ಕಣ್ಣ್ ತೆರ್‍ದ್ ನೋಡ್ಕನ ಎಲ್ಲಾ ವಿಚಿತ್ರವಾಗಿ ಕಂಡತವಳಿಗೆ. ತಾನ್ ಇಲ್ಲಿಗ್ಯಾಕೆ ಬಂದೆತ ಸುತ್ತಲೂ ನೋಡ್ತ್. ಎಲ್ಲಾ ಘಟನೆಗ ಮನಪಟಲಲಿ ಹಾದುಹೋದೊ.

ಕಿಶನ್ ಬೈಕ್ ಬಿದ್ದಲ್ಲಿಗೆ ನಡ್ತ್. ಆ ವ್ಯಕ್ತಿಗೆ ಬಾಳಾ ಪೆಟ್ಟಾಗಿ ಕೆಳಗೆ ಉರ್‍ಳಿತ್ತ್. ಮಧುಕರ! ತನ್ನ ಬಾಳ್‌ಲಿ ಬೀಸಿಬಂದ ಚಂಡಮಾರುತ! ಆದರೂ ಮಾನವೀಯತೆ ಮೂಡಿ ನೀರ್ ಕುಡ್ಸಿ ಗಾಳಿ ಹಾಕಿತ್. ಅಷ್ಟೊತ್ತಿಗೆ ಶ್ರುತಿನೂ ಅಲ್ಲಿಗೆ ಬಾತ್.

ಸ್ವಲ್ಪ ಸಮಯ ಕಳಿಯಕನ ಅಂವ ಕಷ್ಟಲಿ ಕಣ್ಣ್ ಬುಟ್ಟ್ ನೋಡ್ತ್. ಆ ನೋಟಲಿ ಕ್ರೌರ್ಯ ಕರ್‍ಗಿ ಪಶ್ಚಾತ್ತಾಪ ಮೂಡಿತ್ತ್. ತಾನ್ ಇಷ್ಟ್ ಕಷ್ಟ ಕೊಟ್ಟರೂ ತನ್ನ ವೈರನ ಮರ್‍ತ್ ತನ್ನ ತೊಡೆ ಮ್ಯಾಲೆ ತಲೆ ಇಟ್ಟ್‌ಕಂಡ್ ಉಪಚಾರ ಮಾಡ್ತಿರ್‍ವ ಕಿಶನ್.

"ಕಿಶನ್..."ತೇಳಿ ಏನೋ ಹೇಳಿಕೆ ಹೋಗಿ ಕಣ್ಣ್‌ಲಿ ನೀರ್ ತುಂಬ್ಸಿತ್. ಇತ್ತ ತಿರ್‍ಗ್‌ಕನ ಶ್ರುತಿನ ಕಂಡ್ ಕುಶಿಲಿ ಕಣ್ಣ್ ಅರಳಿತ್.

ನನ್ನ ಪಾಪಕ್ಕೆ... ತಕ್ಕ... ಪ್ರಾಯಶ್ಚಿತ ಆತ್... ದೇವರೇ ನಂಗೆ ಸರಿಯಾದ ಶಿಕ್ಷೆ ಕೊಡ್ತ್.. ಶ್ರುತಿ.... ನಿರಪರಾಧಿ... ಅವಳ ಕೈ ಬುಡ್‌ಬಡ... ನನ್ನ.. ಕ್ಷಮಿಸಿ

ಬುಡ್..."ತೇಳುವಷ್ಟರ್ಲಿ.. ಅಂವ ಮೂಕನಾಗಿತ್ತ್.

ಅಷ್ಟೊತ್ತಿಗೆ ಹುಡ್ಕಿಕಂಡ್ ಬಂದ ನಂಜಪ್ಪನವ್ಕೆ ಕಿಶನ್-ಶ್ರುತಿನ ಕಂಡ್ ಆನಂದಲಿ ಮಾತೇ ಬಾತ್‌ಲೆ. ಅವರ್ನ ಬಾಚಿ ತಬ್ಬಿಕಂಡೊ.

ಮಧುಕರನ ಮನೆಯವ್ಕೆ ವಿಷಯ ತಿಳ್ಸಿಕೆ ನಂಜಪ್ಪನವು ಅತ್ತ ಹೊರ್‍ಟೊ. ಕಿಶನ್-ಶ್ರುತಿ ಮನೆ ಕಡೆ ಹೊರ್‍ಟೊ. ಅದು ಮನೆ ಕಡೆತ ಅನ್ನದೆ ಹೊಸ ಬಾಳ್‌ನ ಕಡೆತ ಅನ್ಸಿತ್ತ್. ಕಿಶನ್ ನಿನ್ನ ಇನ್ನ್ ಎಂದಿಗೂ ಬುಡ್‌ದುಲೆತೇಳ್ವಂಗೆ ಅವಳ್ನ ಎದೆಗೊತ್ತಿ ನಡ್ದಿತ್ತ್.

ಮಾರನೆ ದಿನ ಪೇಪರ್‌ಲಿ ಇನ್ಸ್‌ಪೆಕ್ಟರ್ ಪ್ರಸಾದ್ ಅಪಘಾತಲಿ ಕೈ-ಕಾಲ್ ಕಳ್ಕಂಡ ಸುದ್ದಿ ಮುಖಪುಟಲಿ ಇತ್ತ್.

* * * * *

# ಹುಚ್ಚ

**ಸಾಯಂಕಾಲ** ನಾಕ್ ಗಂಟೆ ಆಗಿತ್. ಶಾಲೆಲಿ ಗಂಟೆ ಹೊಡ್ದಂಗೆ ಎಲ್ಲಾ ಮಕ್ಕ ಹೊರಗೆ ಬಂದ್ ಅವರವರ ಮನೆಗೆ ಹೊರ್ಟೊ. ಒಂದ್ ಮಕ್ಕಳ ಗುಂಪ್ ದಾರಿಲಿ ಹೋಗ್‌ತ್ತಿದ್ದ ಹುಚ್ಚನೊಬ್ಬನ ಹಿಂದೆ ಕುತೂಹಲಂದ ತಿರ್‌ಗ್ತಿತ್. ಹುಚ್ಚನ ಅತಿರೇಕದ ವರ್ತನೆಗ ಅವುಕೆ ಕುಶಿ ಕೊಡ್‌ತಿದ್ದೊ. ಎಂತೆಂತೊ ಬಡಬಡಿಸಿಕಂಡ್, ಒಮ್ಮೆ ನಡ್ಕಂಡ್ ಒಮ್ಮೆ ಓಡಿಕಂಡ್ ಹೋಗ್‌ವ ಹುಚ್ಚನ ಹಿಂದೆನೇ ಮಕ್ಕ ಹೋಗ್‌ತಿದ್ದೊ.

ಹರ್ದ, ಕೊಳಕಾದ, ಮಾಸಿದ ಬಟ್ಟೆ, ಕೆದರ್ದ ತಲೆ ಕೂದಲ್, ಕಂಕುಳಲಿ ಒಂದ್ ಸಣ್ಣ ಬಟ್ಟೆ ಗಂಟ್, ಆ ಬಟ್ಟೆ ಗಂಟ್‌ನ ತನ್ನ ಸರ್ವಸ್ವತೇಳ್ವಂಗೆ ಜೋಪಾನಲಿ ಎದೆಗೆ ಒತ್ತಿ ಹಿಡ್ಕಂಡಿತ್. ಸ್ವಲ್ಪ ದೂರ ನಡ್ದೋ, ಓಡಿಯೊ ಹೋಗಿ ಒಂದ್ ಕಡೆ ಕುದ್ದ್ ಆ ಬಟ್ಟೆ ಗಂಟ್‌ನ ಬಿಚ್ಚಿ ಹುಡ್ಕಿ ಎಂತನೋ ತೆಗ್ದ್ ಕಣ್ಣ್ ಅರ್‌ಳಿಸಿ ನೋಡ್‌ತಿತ್. ಕೈಯಿಂದ ಅದ್ನ ಪೂಜಿ ಅದ್ಕೆ ಮುತ್ತ್ ಕೊಟ್ಟ್ ಮತ್ತೆ ಮೊದ್ಲ್‌ನಂಗೆ ಬಟ್ಟೆ ಗಂಟ್‌ಲಿ ಇಸಿಕಂಡ್ ಮತ್ತೆ ನಡಿಯಕೆ ಸುರು ಮಾಡ್‌ತಿತ್. ಮುಖಲಿ ಎಂತದೊ ಹೆದ್ರಿಕೆ, ಗಾಬರಿ ಎಲ್ಲಾ ಇತ್.

ಅವಂಗೆ ಬೀದಿಲಿ ಇರ್ವ ನಲ್ಲಿ ನೀರೇ ಪಾನೀಯ. ಕರುಣಾಮಯಿಗ ಯಾರಾದ್ರ್ ಕೊಡ್ವ ತಂಗಳನ್ನನೇ ಭೋಜನ, ಮರದ ಕೆಳಗೊ, ಯಾರೂ ಇಲ್ಲದಿರ್ವ ಪಾಳುಬಿದ್ದ ಗುಡಿಗಳೊ, ಬಸ್ ಸ್ಟಾಂಡ್‌ಲೊ ಅವನಾ ವಾಸ, ಅದೇ ಅವನ ಮನೆ! ಗೊತ್ತ್‌ಗುರಿ ಇಲ್ಲದ ಬಾಳ್, ಹುಚ್ಚಗೆಂತ ದಿನಚರಿ!!

ಪಕ್ಕದ ಮೋರಿ ಮ್ಯಾಲೆ ಕುದ್ದ್‌ಕಂಡ್ ಇದ್ದಂವ ಇದ್ದಕ್ಕಿದ್ದಂಗೆ ಓಡಿಕೆ ಸುರ್ ಮಾಡ್ತ್. ಅವನ ಹಿಂದೆ ಬರ್ತಿದ್ದ ಮಕ್ಕಳ ಗುಂಪ್ ಇದನ ಕಂಡ್ ಆಶ್ಚರ್ಯಲಿ ನೋಡ್‌ತಿದ್ದಂಗೆ, ಶಾಲೆಂದ ಮನೆಗೆ ಹೊರ್ಟಿದ್ದ ಪೊರ್ಲುನ ಸಣ್ಣ ಗೂಡೆನ ಹತ್ರ ಹೋಗಿ,

"ಶಾಲಿನಿ, ನನ್ನ ಶಾಲಿನಿ, ನೋಡ್ ಬಾ ಇಲ್ಲಿ, ನಾನ್ ಯಾರ್‌ತ ಗೊತ್ತಾತೆಲೆನ ಬಾ ಮನೆಗೆ ಪೋಯಿ"ತ ಅವಳ ಬಾಚಿ ತಬ್ಬಿಕಣ್ತ್.

ಆ ಗೂಡೆ ಹೆದ್ರಿ ಜೋರಾಗಿ ಕಿರ್ಚ್ಯನ ಜನ ಗುಡ್ಡೆ ಸೇರ್ದೊ. ಶಾಲೆ ಮಕ್ಕ ಅವಂಗೆ ಕಲ್ಲ್ ಹೊಡ್ದೊ. ಮಣ್ಣ್ ಬಿಸಾಕಿದೊ. ಗೂಡೆ ತಪ್ಪಿಸಿಕಂಡ್ ಓಡ್ತ್. ಹುಚ್ಚನ ಮೈಯಿಂದ ರಕ್ತ ಹರಿಯಕೆ ಸುರು ಆತ್. ಅಂವ ಅಲ್ಲಿಂದ ಎಂತದೋ ಹೇಳಿಕಂಡ್ ಓಡಿಹೋತ್.

* * * * *

ಚಂಗಪ್ಪ ಮತ್ತೆ ವಿಮಲ ಇವರ್ದ್ ಹೊಟ್ಟೆಗೆ ಬಟ್ಟೆಗೆ ತೊಂದರೆ ಇಲ್ಲೆತೇಳ್ವಂತ ಸಂಸಾರ. ಇವರ ಸುಖ ಸಂಸಾರದ ಬಳ್ಳಿಲಿ ಅರಳಿದ ಪೊರ್ಲುನ ಎರ್ಡ್ ಹೂಗ ಸಾಗರ್ ಮತ್ತೆ ಶಾಲಿನಿ. ಸಾಗರ್ ಮತ್ತೆ ಶಾಲಿನಿ ನಡುಲಿ ಎಂಟು ವರ್ಷ ವ್ಯತ್ಯಾಸ ಇತ್ತ್. ಇದ್ದ ನಾಕ್ ಎಕ್ರೆ ಕಾಫಿ ತೋಟನ ಬಾಳಾ ಲಾಯ್ಕ ಇಟ್ಟಿದ್ದೊ ಚಂಗಪ್ಪನವು. ಅವ್ರ ಬದ್ಕ್‌ಗೆ ದಾರಿ ಕಾಫಿ ತೋಟ ಮತ್ತೆ ಸ್ವಲ್ಪ ಗದ್ದೆ ಮಾತ್ರ ಉಂಬಕೆ ಉಡಿಕೆ ಸಾಕಾಗಿತ್ತ್.

ಚಂಗಪ್ಪನವರ ತಮ್ಮ ತಮ್ಮಯ್ಯ ಸಹ ಅವರ ಮನೆನ ಇನ್ನೊಂದ್ ಭಾಗಲಿ ವಾಸವಾಗಿದ್ದೊ. ಅವರ ಅಪ್ಪ ಇಬ್ಬರ್ ಗಂಡ್ ಮಕ್ಕಳಿಗೆ ಒಂದೇ ಮನೆಲಿ ಎರಡ್ ಭಾಗ ಮಾಡಿಕೊಟ್ಟಿದ್ದೊ. ತಮ್ಮಯ್ಯನವ್ಕೂ ಇವರಷ್ಟೇ ಆಸ್ತಿ ಇತ್ತ್. ಇಬ್ಬರೂ ಪಾಲ್ ತಕಂಡ್ ಬೇರೆ ಬೇರೆ ವಾಸ ಮಾಡ್ತಿದ್ದೊ.

ಆದರೆ ಚಂಗಪ್ಪನವ್ಕೆ ಅಣ್ಣತೇಳ್ವ ಕಾರಣಕ್ಕೆ ತಮ್ಮಂಗಿಂತ ಅರ್ಧ ಎಕರೆ ಜಾಗ ಜಾಸ್ತಿ ಕೊಟ್ಟಿದ್ದೊ. ಇದ್ ತಮ್ಮಯ್ಯನವ್ರ ಅಸಮಾಧಾನಕ್ಕೆ ಕಾರಣ ಆಗಿತ್ತ್.

ಮ್ಯಾಲೇ ಎಷ್ಟೇ ಲಾಯ್ಕ ಇದ್ದಂಗೆ ಕಂಡರೂ ಅಣ್ಣನೊಟ್ಟಿಗೆ ಆಗೊಮ್ಮೆ ಈಗೊಮ್ಮೆ ಜಗಳ ಆಗ್ತಿತ್ತ್. ಇದಕ್ಕೆ ತಮ್ಮಯ್ಯನ ಹೆಣ್ಣ್ ಕಮಲ ಕುಮ್ಮಕ್ಕ್ ಕೊಡ್ತಿತ್ತ್.

ವಿಮಲನವ್ರ ಅಕ್ಕನ ಮಗಳ ಮದ್ವೆ ಇತ್ತ್. ಮಕ್ಕಳಿಗೆ ಇಬ್ಬರಿಗೂ ಪರೀಕ್ಷೆ ಇದ್ರಂದ ಮಕ್ಕಳ್‌ನ ಶಾಲೆಗೆ ಕಳ್ಸಿ ಚಂಗಪ್ಪ ಮತ್ತೆ ವಿಮಲ ಇಬ್ಬರು ಹೋಗಿ ಬಾದುತ ತೀರ್ಮಾನ ಮಾಡ್ದೊ. ಹಂಗೆ ಮಾರನೆ ದಿನ ಹೊತ್ತಾರೆ ಮಕ್ಕಳ್‌ನ ಶಾಲೆಗೆ ಕಳ್ಸಿ ಬೇಗ ಬಂದು ಬುಟ್ಟವೆತೇಳಿ, ಇಬ್ಬರು ಕಾರ್‌ಲಿ ಹೊರ್ಟೊ.

ಮಧ್ಯಾಹ್ನ ಆಕನ ಶಾಲೆ ಹತ್ರ ಬಂದ ಸೋದರ ಮಾವ ರಾಮಪ್ಪನ ಕಂಡ್ ಮಕ್ಕಳಿಗೆ ಆಶ್ಚರ್ಯ ಆತ್. ಅವರ ಮುಖ ಬಾಡಿತ್ತ್. ಟೀಚರ್ ಇಬ್ಬರ್ನ ಹೋಗಿತ ಕಳ್ಸಿದೊ. ಇಬ್ಬರಿಗೂ ಏನೋ ಸಂಕಟ, ಗಾಬರಿ.

ಮನೆ ಹತ್ರ ಬಾಕನ ಮನೆ ಮುಂದೆ ಜನ ಸಾಗರವೇ ಸೇರಿತ್ತ್. ವಳಗೆ ಬಂದ್ ನೋಡ್ರೆ..... ಮದ್ವೆಗೆತ ಹೋಗಿದ್ದ ಅಪ್ಪ-ಅಮ್ಮ ಹೆಣವಾಗಿ ಮಲ್ಗಿದ್ದೊ. ಹೊತ್ತಾರೆ ಮದ್ವೆಗೆತ ಇವು ಹೊರ್ಟಿದ್ದ ಕಾರ್, ಲಾರಿಗೆ ಕುಟ್ಟಿ ಮದ್ವೆಗೆ ಹೊರ್ಟವು ಮಸಣ ಸೇರಿದ್ದೊ.

ಮಕ್ಕ ಇಬ್ಬರೂ ಬುಡ ಕಡ್ದ ಬಾಳೆನಂಗೆ ಅಪ್ಪ-ಅಮ್ಮನ ಮೈಮೇಲೆ ಬಿದ್ದ್ ಗೋಳಾಡ್‌ದೊ. ಯಾರ ಸಮಾಧಾನದ ಮಾತೂ ಅವರ್ನ ಸಮಾಧಾನ ಪಡ್ಸಿಸಿತ್‌ಲೆ. ಚಿಕ್ಕಪ್ಪ-ಚಿಕ್ಕವ್ವ ಇಬ್ಬರೂ ಜನರ ಕಣ್ಣ್ ಕಟ್ಟಿಕೆ ನಾವ್ ವಳೋತೇಳಿ ಸಮಾಧಾನ ಹೇಳ್ದೊ. ಬಂದವೆಲ್ಲಾ, 'ಅಯ್ಯೋ ಪಾಪ...'ತೇಳಿ ಹೋಗ್‌ತಿದ್ದೊ.

ಎಲ್ಲಾ ಕಾರ್ಯಗ ಮುಗಿಯಕೆ ಮುಟ್ಟ ಮಾವ ಇದ್ದ್, ಮಕ್ಕಳ್‌ನ ಸಮಾಧಾನ ಮಾಡಿ ತಮ್ಮೊಟ್ಟಿಗೆ ಕರ್ಕಂಡ್ ಹೋದೊ. ಸ್ವಲ್ಪನೇ ದಿನಲಿ ಮಾವನ ಮನೆಲಿ ಕತ್ತೆ ಚಾಕರಿ ಅವರ ಪಾಲಿಗೆ ಬಾತ್. ಒಂದ್ ಕಡೆ ಶಾಲೆಗೆ ಹೋಗದೆ ಬಾಳ ದಿನಾ ಆಗಿತ್ತ್. ಮಾವ ನಮ್ಮವ ಆದರೂ ಅತ್ತೆ ನಮ್ಮವಳಾತೇಳ್ವಂಗೆ ಆಗಿತ್ತ್.

ಸಾಗರ್ ಬಾಳಾ ಸ್ವಾಭಿಮಾನಿಯಾಗಿತ್ತ್. ಅವಂಗ್ದೆ ತನ್ನ ಮನೆ ಮತ್ತೆ ಶಾಲೆನ ಗ್ಯಾನ ಬಾಕೆ ಶುರ್ ಆತ್. ಅಂವ ಮಾವಂಗೆ ಹೇಳಿ ಮನೆಗೆ ಬಾಕನ ಆಗಲೇ ಚಿಕ್ಕಪ್ಪ ಆ ಮನೆನ ವಾರಸುದಾರ ಆಗಿ ಮೆರ್ದಿತ್ತ್. ಇವ್ಕೆ ಮಾವನ ಮನೆನ ಅನುಭವನೇ ಇಲ್ಲಿಯೂ ಆತ್. ತಬ್ಬಲಿ ಮಕ್ಕಳಾದ ಸಾಗರ್-ಶಾಲಿನಿಯರ್ ಕಷ್ಟ ಪರಂಪರೆನ ಹುಟ್ಟ್‌ಕನೇ ಪಡ್‌ದ್ ಬಂದಿದ್ದೊ ಏನೋ!

ಸಾಗರ್-ಶಾಲಿನಿಗೆ ಓದಿಕೆ ದುಡ್ಡಿಗೆ ಕಷ್ಟ ಆತ್. ಸಾಗರ್‌ಗೆ ಶಾಲೆಗೆ ಫೀಸ್ ಕಟ್ಟಿಕೆ ಆಗದೆ ಅವನ ಓದ್ ಇತಿಶ್ರೀ ಆತ್. ಪುಟ್ಟ ಶಾಲಿನಿನ ಸಹ ಶಾಲೆ ಬಿಡ್ಸಿ

ಮನೆ ಕೆಲ್ಸಕ್ಕೆ ಹಾಕನೋತೇಳ್ವ ಚಿಕ್ಕವ್ವನ ಮಾತ್ ಕೇಳಿ ಸಾಗರ್‌ನ ಎಳೆ ಹೃದಯ ರೋಷಂದ ಕುದ್ದ್ ಹೋತ್. ತನ್ನ ಜೀವನ ಮುಡ್ಪಾಗಿಟ್ಟ್ ತನ್ನ ಪ್ರಾಣ ಪದಕದಂಗೆ ಇರ್ವ ಶಾಲಿನಿನ ಓದ್ಸಿ ಮುಂದೆ ತನ್ನೆತ ಪಣ ತೊಟ್ಟತ್. ಹಂಗೆತ ಸಾಯಂಕಾಲ ಚಿಕ್ಕಪ್ಪನೊಟ್ಟಿಗೆ ಈ ವಿಷ್ಯ ಹೇಳ್ಕನ ಚಿಕ್ಕಪ್ಪ, ಚಿಕ್ಕವ್ವಂಗೆ ಈ ಹೈದನ ಧೈರ್ಯ ಕಂಡ್ ಆಶ್ಚರ್ಯ ಆದರೂ, "ಓದ್ಸಿದೆಯಂತೆ, ಓದ್ಸಿದೆ ಎಷ್ಟ್ ಮಾಡಿ ಇಟ್ಟುಟ್ಟ್ ನಿಮ್ಮ ಅಪ್ಪ. ಇದ್ದದೆಲ್ಲಾ ಇವರ ಅಪ್ಪ-ಅಮ್ಮನ ಸಾವು, ಶುದ್ಧ, ತಿಥಿ ತೇಳಿ ಖರ್ಚಾತ್. ತಬ್ಬಲಿ ಮಕ್ಕ ತೇಳಿ ನಾಕ್ ತುತ್ತ್ ಅನ್ನ ಹಾಕಿರೆ ಇವಂಗೆ ಮೈಯೆಲ್ಲಾ ಸೊಕ್ಕು. ನಿನ್ನ ತಂಗೆನ ಕರ್ಕಂಡ್ ಎಲ್ಲಾರ ಹಾಳಾಗಿ ಹೋಗ್ ಇನ್ನ್ ನಿನ್ನಾ ಮುಖ ತೋರ್ಸ್‌ಬಡ"ತೇಳಿ ಗರ್ಜಿಸಿತ್.

ಸಾಗರ್‌ಗೆ ಮುಂದೆನ ದಾರಿ ಕಾಣದಾತ್. ಮನೆಯವು, ನೆಂಟ್ರ್‌ಗ ಎಲ್ಲಿ ತಮಿಗೆ ದೆಶೆ ಬಾದೊತ ಆದಷ್ಟ್ ದೂರ ಇದ್ದೊ. ಆಸ್ತಿ, ಮನೆ ಇದ್ದರೂ ಚಿಕ್ಕಪ್ಪನ ದುರಾಶೆಂದ ಗತಿ ಇಲ್ಲದಂಗೆ ಆಗಿ ಬುಟ್ಟೊ ಮಕ್ಕ. ಆದರೂ ಹೆಂಗಾರೂ ಬದ್ಕಕುತ ಹೇಳ್ವ ಚಲ ಸಾಗರ್‌ಗೆ ಮೂಡ್ತ್. ಬೆಳಿಗ್ಗೆ ಎದ್ದ್ ಊರ್‌ನ ಮನೆಮನೆಗೆ ಅಲ್ದ್ ಕೆಲ್ಸ ಕೇಳ್ತ್. ಎಲ್ಲಾ ಮನೆಯವು ಒಂದಲ್ಲ ಇನ್ನೊಂದ್ ಕಾರಣಕ್ಕೆ ಅವಂಗೆ ಕೆಲ್ಸ ಕೊಡಿಕೆ ಒಪ್ಪಿತ್ಲೆ. ಕಡೇಲಿ ಒಂದ್ ಮನೆಯವು ಇವಂಗೆ ಕೆಲ್ಸ ಕೊಡಿಕೆ ಒಪ್ಪಿದ್ದೊ. ಮನೆ ಕೆಲ್ಸದ ಒಟ್ಟಿಗೆ ತೋಟದ ಕೆಲ್ಸನೂ ಅವನ ಪಾಲಿಗಿತ್ತ್. ತಮ್ಮ ಮನೆಲಿ ಒಂದ್ ಸಣ್ಣ ಕೋಂಬರೆನ ಸಾಗರ್ ಮತ್ತೆ ಶಾಲಿನಿಗೆ ಬುಟ್ಟ್‌ಕೊಟ್ಟೊ. ಸಾಗರ್ ಬಾಳಾ ನಿಷ್ಠೆಲಿ ಕೆಲ್ಸ ಮಾಡಿ ಮನೆಯವ್ರ ಮೆಚ್ಚಿಗೆ ಗಳ್ಸಿತ್. ಮನೆವು ಇಬ್ಬರ್‌ನ ಪ್ರೀತಿಂದ ನೋಡಿಕಂಬತಿದ್ದೊ.

ಶಾಲಿನಿನ ಮನೆ ಹತ್ರ ಇರ್ವ ಶಾಲೆಗೆ ಸೇರ್ಸಿತ್ ಸಾಗರ್. ಅವ್ಳು ದಿನಾ ತನ್ನ ಗೆಳತಿಗಳೊಟ್ಟಿಗೆ ಶಾಲೆಗೆ ಹೋಗಿ ಬಾತಿತ್ತ್. ಸುಖಲಿ ಬೆಳ್ದಿದ್ದರೂ ಅವು ಈಗಿನ ಪರಿಸ್ಥಿತಿ ಅವುಕೆ ಹೊಂದಿಕೊಂಡು ಹೋಗ್ವ ಗುಣನ ಕಲ್ಸಬಿಟ್ಟಿತ್ತ್. ಅವ್ಕೆ ಕೆಲ್ಸ ಮಾಡ್ವ ಮನೆಲೇ ಊಟ ಸಿಕ್ಕ್‌ತಿತ್ತ್. ಕೈಗೆ ಸಿಕ್ಕುವ ಸ್ವಲ್ಪ ದುಡ್ಡ್‌ಲಿ ಪುಸ್ತಕ ಮತ್ತೆ ಬೇರೆ ಖರ್ಚಿಗೆ ಹಣ ಕೊಡುತಿತ್ತ್. ಮನೆಯವ್ರ ಮಕ್ಕಳ ಹಳೇ ಪುಸ್ತಕ ಸಿಕ್ಕ್‌ತಿತ್ತ್.

ಇವು ಇದ್ದ ಮನೆನ ಎದ್ರುನ ಮನೆ ಶಾಲಿನಿನ ಗೆಳತಿ ಪ್ರೀತಿನ ಮನೆ. ಪ್ರೀತಿನ ಅಕ್ಕ ಗಾಯತ್ರಿ. ದಿನಾ ಇಬ್ಬರೂ ಇವು ಇರ್ವ ಮನೆಗೆ ಮಕ್ಕಳೊಟ್ಟಿಗೆ ಆಡಿಕೆ ಬಂದ್ ಹೋಗ್‌ತಿದ್ದೊ. ಹಂಗೆ ಹೋಕನ ಸಾಗರ್‌ನೊಟ್ಟಿಗೆ ಅನುಕಂಪಂದ ನಾಕ್ ಮಾತಾಡಿ ಹೋಗ್‌ತಿತ್ತ್. ಗಾಯತ್ರಿ 'ಹಾಂ, ಹೂಂ'ಲೇ ಮುಕ್ತಾಯ

ಆಗ್‌ತಿತ್ತ್ ಸಾಗರ್‌ನ ಮಾತ್. ದಿನ ಕಳ್ದಂಗೆ ಇವ್ರ ಮಧ್ಯೆ ಸಲಿಗೆ ಬೆಳ್ದಿತ್ತ್.

ಹಗಲಿಡೀ ದುಡ್ಡ್ ದಣ್‌ದ ಸಾಗರ್‌ಗೆ ಗಾಯತ್ರಿನ ಮುಖ ಕಂಡರೆ ಅವನ ದಣಿವೆಲ್ಲಾ ಮಾಯವಾಗ್‌ತಿತ್ತ್. ಇವರ ಪರ್‍ಚಯದ ರೀತಿ ಬದಲಾಗ್‌ತಿತ್ತ್. ಇವರಿಬ್ಬರ ಪ್ರೇಮ ವಾಹಿನಿ ಗುಪ್ತವಾಗಿ ಹರಿಯತಿತ್ತ್.

ಸಾಗರ್-ಶಾಲಿನಿಯರ್ ಕುಶಿಲಿ ತಮ್ಮ ಕಷ್ಟಗಳ್ನ ಮರ್‌ತಿದ್ದೊ. ಸಾಗರ್-ತಂಗೆನ ಅಂಗೈಲಿಟ್ಟ್ ನೋಡಿಕಂಬತಿತ್ತ್.

ಮತ್ತೆ ಇವರ ಚಿಕ್ಕಪ್ಪ ಇವರ್‍ನ ಮನೆಗೆ ಬನ್ನಿತ ಕರ್‍ಯಕ್ಕೆ ಬಂದಿದ್ದೊ. ಅಣ್ಣನ ಆಸ್ತಿ ನುಂಗಿ ಮಕ್ಕಳ್‌ನ ಬೀದಿಗೆ ಹಾಕಿದತ ಜನ ಹೀಯಾಳ್‌ಸ್ತಿದ್ದೊ. ಅವ್ಕೆ ಪಾಪ ಪ್ರಜ್ಞೆ ಕಾಡಿಕೆ ಸುರು ಆಗಿತ್ತ್. ಆದರೆ ಇವಿಬ್ಬರೂ ಹೋಕೆ ಒಪ್ಪಿತ್ಲೆ.

* * * * *

ಅಂದ್ ಎಂದ್‌ನಂಗೆ ಶಾಲೆಗೆ ಹೋಗಿದ್ದ ಶಾಲಿನಿ ಸಾಯಂಕಾಲ ಆದರೂ ಮನೆಗೆ ಬಾರದೆ ಇರ್ಕನ ಸಾಗರ್‌ಗೆ ಗಾಬರಿ ಆತ್. ಈಗ ಬಂದದೆ. ಶಾಲೆಲಿ ಇರ್ದುೞ, ಇಲ್ಲ ಯಾರೊ ಗೆಳತಿ ಒಟ್ಟಿಗೆ ಹೋಗಿರ್ದುೞತ ಎಷ್ಟ್ ಹೇಳ್ದರೂ ಕೇಳದೆ ತಾನೇ ಹುಡ್ಕಿಕಂಡ್ ಹೊರಟತ್. ಎಲ್ಲವೂ ಒಂದೊಂದ್ ಕಡೆ ಹೊರ್‍ಟೊ. ಗಾಯತ್ರಿ ಸಾಗರ್‌ನೊಟ್ಟಿಗೆ ಹೊರ್‍ಟತ್.

ಎಲ್ಲಿ ಹುಡ್ಕಿರೂ ಶಾಲಿನಿನ ಸುಳಿವೇ ಸಿಕ್ಕಿತ್ಲೆ. ಸಾಗರನ ದುಃಖ ಬತ್ತದ ತೊರೆಯಾಗಿತ್ತ್. ಶಾಲಿನಿಗಾಗಿ ನಡ್ದ್ ನಡ್ದ್ ಬಳಲಿತ್. ನೆನ್ದ್ ನೆನ್ದ್ ಕೊರ್‍ಗಿತ್. ಅನ್ನ ನಿದ್ದೆ ಇಲ್ಲದೆ ಸೊರಗಿತ್.

ದಿನಗ, ವಾರಗ, ತಿಂಗಳ್‌ಗ ಉರ್‍ಳಿ ಹೋದೊ. ಶಾಲಿನಿನ ಸುಳಿವೇ ಸಿಕ್ಕಿತ್ಲೆ. ಸಾಗರ್ ಅರೆ ಮರುಳ ಆಗಿತ್ತ್. ತನ್ನ ಬಾಳ್‌ನ ಗುರಿಯೇ ಇನ್ನಿಲ್ಲದ ಮ್ಯಾಲೆ ಅವಂಗೆ ಪ್ರಪಂಚನೇ ಬೇಡವಾತ್. ಆದರೂ ಪ್ರತಿ ದಿನನೂ ಕಾದತ್. 'ಹನ್ನೆರಡ್ ವರ್ಷದ ಪುಟ್ಟ ಗೂಡೆ ಏನಾತ್‌ತೇಳ್ದೇ ಬಿಡ್ಸಿಕೆ ಆಗದ ಒಗಟಾತ್.

ಸಾಗರ್ ದಾರಿಲಿ ಹೋಗ್ವ ಪ್ರತಿಯೊಂದು ಗೂಡೆಗಳ ಮುಖನ ಪರೀಕ್ಷಿಸಿ ನೋಡ್‌ತಿತ್ತ್, ನಿಟ್ಟುಸಿರ್ ಬುಡ್‌ತ್ತಿತ್ತ್. ತನ್ನ ದುಃಖದ ಪರಮಾವಧಿಲಿ ಅವಂಗೆ ಸಿಕ್ಕ್‌ತ್ತಿದ್ದ ಒಂದೇ ಒಂದು ಸಮಾಧಾನದ ಮಾತ್‌ತೇಳ್ರೆ ಅದ್ ಗಾಯತ್ರಿದ್. ಅವ್ಳು ದಿನಾ ಅವಂಗೆ ಅವ್ನ ಕೆಲ್ಸದ ಕಡೆಗೆ ಗಮನ ಹರ್‍ಸಿ ಶಾಲಿನಿನ ಮರೆವಂಗೆ ಮಾಡಿಕೆ ಪ್ರಯತ್ನ ಮಾಡ್‌ತ್ತಿತ್ತ್. ಸಾಗರ್ ನಿಧಾನಲಿ ಶಾಲಿನಿನ ಮರ್‍ಯಕೆ ಶುರು

ಮಾಡ್ತ್. ಅವ್ಳ ಮರ್ತ್ ಅವನ ಮಾಮೂಲ್ ಕೆಲ್ಸಲಿ ತೊಡ್ಗಿಕೆ ಅವಂಗೆ ಬಾಳಾ ತಿಂಗಗಳೇ ಬೇಕಾತ್.

ಸಾಗರ್‌ಗೆ ಎಂತದೊ ಕಳವಳ ಕಾತರ, ಗಾಯತ್ರಿನ ನೋಡದೆ ಸುಮಾರ್ ದಿನ ಆಗಿ ಹೋಗಿತ್ತ್. ಆದರೆ ವಿಚಾರ್ಸಿಕೆ ಒಂತರಾ ಆಗ್ತಿತ್ತ್. ದಿನಾ ಬರ್ತಿದ್ದವ್ಳಿಗೆ ಎಂತಾತೋತ ಒಂದ್ ಕಡೆ ಹೆದ್ರಿಕೆ. ಕಡೆಗೆ ಒಂದ್ ದಿನ ಚಪ್ಪೆ ಮುಖ ಹಾಕಿಕಂಡ್ ಗಾಯತ್ರಿ ಬಾತ್. ಮಾತ್‌ಲಿ ಆಸಕ್ತಿ ಇಲ್ಲೆ. ಮೊದ್ಲಿನ ಸಲಿಗೆ ಇಲ್ಲೆ, ಸಾಗರನ ಕಂಡ್ ಬಿಕ್ಕಿ ಬಿಕ್ಕಿ ಮರ್ಲತ್. ಮರ್ಲ್‌ಕಂಡೇ ತನಿಗೆ ಮದ್ವೆ ನಿಶ್ಚಯ ಆದ ವಿಷ್ಯನ ತಿಳ್ಸ್‌ಕನ ಸಾಗರಂಗೆ ಆಘಾತ ಆತ್. ತನಿಗೆ ಇದ್ದ ಒಂದೇ ಒಂದ್ ಆತ್ಮೀಯ ಬಂಧುವೂ ಇನ್ನಿಲ್ಲೆತ ದುಃಖಿಸಿತ್. ಅಂವ ಎಷ್ಟ್ ಹೊತ್ತ್ ಹಂಗೇ ಮರ್ಲ್‌ಕಂಡ್ ಕುದ್ದಿತ್ತೊ, ಅವಂಗೆ ಎಚ್ಚರ ಆಕನ ಗಾಯತ್ರಿ ಇತ್ತ್‌ಲೆ. ಸುತ್ತೆಲ್ಲಾ ಕತ್ತಲೆ ತುಂಬಿತ್ತ್.

ಮಾರನೇ ದಿನ ಸಾಗರ್ ಕಾಂಬಲೆತೇಳ್ವ ಸುದ್ದಿ ಎಲ್ಲಾ ಕಡೆ ಹರ್ಡಿತ್ತ್.

* * * * *

"ನಮಸ್ತೆ ಡಾಕ್ಟರ್"

"ನಮಸ್ತೆ ಬನ್ನಿ ಎಂತ ಆಕಾಯ್ತ್"

"ಡಾಕ್ಟ್ರೆ, ನಾನ್ ಕೃಷ್ಣಪ್ಪತ, ಲಾಯರ್. ನಮ್ಮ ಕಡೆಂದ ಒಬ್ಬ ಪೇಷಂಟ್‌ನ ಕರ್ಕಂಡ್ ಬಂದೊಳೆ ಸ್ವಲ್ಪ ಎಮರ್ಜೆನ್ಸಿ ಕೇಸ್. ಸ್ವಲ್ಪ ಬೇಗ ನೋಡೊಕಾಗಿತ್ತ್."

"ಆಗಲಿ ಈಗಲೇ ಬನ್ನೆ"ತ ಡಾಕ್ಟರ್ ಹೊರ್ಲು ಬಂದೊ.

ಸಣ್ಣ ಗೂಡೆ ಸೊಯ ಇಲ್ಲದೆ ಮಲ್ಗಿತ್ತ್. ಮಡಿಯಾಗಿದ್ದ ಬಟ್ಟೆ ನಾಕೈದ್ ಕಡೆ ಹರ್ಡಿತ್ತ್. ಗೂಡೆನ ಮ್ಯಾಲೆ ಬಲವಾದ ಆಘಾತ ಆಗುಟ್ಟುತೇಳಿಕಂಡ್ ಡಾಕ್ಟರ್ ತಕ್ಷಣ ಚಿಕಿತ್ಸೆ ಆರಂಭಿಸಿದೊ.

"ನೋಡಿ, ಈ ಗೂಡೆ ನಿಮಿಗೆ ಏನಾಕು?"

"ಈ ಗೂಡೆ ಯಾರೊ ಗೊತ್ತಿಲ್ಲೆ ಡಾಕ್ಟ್ರೆ. ನಾನ್ ಕಾರ್‌ಲಿ ಬಾಕನ ಪಕ್ಕದ ಹಳ್ಳಿಂದ ಸ್ವಲ್ಪ ದೂರಲಿ ಯಾರೂ ಇಲ್ಲದ ನಿರ್ಜನ ಜಾಗೆಲಿ ಹಿಂಗೆ ಬಿದ್ದಿತ್ತ್. ಸಂಶಯ ಬಂದ್ ಹೋಗಿ.. ನೋಡ್ರೆ ಸೊಯನೇ ಇತ್ತ್‌ಲೆ. ಹಂಗೆ ಆಸ್ಪತ್ರೆಗೆ ಕರ್ಕಂಡ್ ಬಂದೆ"

"ಸರಿ, ವಳ್ಳದಾತ್, ಅಂದಂಗೆ ಇವಳ ನೀವೇ ನೋಡ್ಕಂಡ್ರೆ ಹೆಂಗೆ?"

"ಆಗಲಿ ಡಾಕ್ಟ್ರೆ ಎಷ್ಟ್ ಖರ್ಚಾದರೂ ಬೇಜಾರ್ ಇಲ್ಲೆ. ಬೇಗ ಉಸಾರ್

ಆದರೆ ಸಾಕ್. ಆ ಗೂಡೆನ ಕಂಡರೆ ಎಂತದೊ ಒಂತರ ಮಮತೆ ಹುಟ್ಟಿದೆ. ಮಕ್ಕ ಇಲ್ಲದ ನಂಗೆ ದೇವರೇ ಇವಳ್ನ ಕೊಟ್ಟಾತ ತಿಳ್ಕಣೆ"

"ತುಂಬಾ ಸಂತೋಷ. ಈ ಕಾಲಲಿ ನಿಮ್ಮಂತವು ಇರ್ದು ಅಪರೂಪ. ಗೂಡೆಗೆ ಸೊಯ ಬಂದ ಮ್ಯಾಲೆ ವಿಚಾರ್ಸನ"

"ಹಂಗೇ ಆಗಲಿ ಡಾಕ್ಟ್ರೆ"

ಇವರ ಮಾತ್ ಸಾಗ್‌ತಿದ್ದಂಗೆ ಮಲ್ಗಿದ್ದ ಗೂಡೆ ಮಿಸುಕಾಡಿ ನರಳಿಕಂಡ್ ಕಣ್ಣ್ ತೆರ್ತ್"

"ನೀರೂ..." ನರ್ಸ್ ಬಂದ್ ನೀರ್ ಕುಡ್ಸಿತ್.

"ನಿನ್ನ ಹೆಸ್ರೆಂತಮ್ಮ"

ಗೂಡೆ ಗೊತ್ತಿಲ್ಲೆತ.. ತಲೆ ಆಡ್ಸಿತ್. ಕಣ್ಣ್ ಪಿಳಿ ಪಿಳಿ ಬುಟ್ಟ್

"ನಿನ್ನ ಮನೆ ಎಲ್ಲಿ"

"ಗೊತ್ತ್‌ಲೆ"

"ನೀನ್ ಶಾಲೆಗೆ ಹೋಗ್ತಾವಳಾ, ಯಾವ ಸ್ಕೂಲ್"

"ಗೊತ್ತ್‌ಲೆ"

"ಗೊತ್ತ್‌ಲೆ, ಗೊತ್ತ್‌ಲೆ, ಮತ್ತೆಂತಮ್ಮ ಗೊತ್ತ್ ನಿಂಗೆ"

ನಂಗೆ ಎಂತನೂ ಗೊತ್ತ್‌ಲೆ, ನಂಗೆ ಒಂದೂ ಗ್ಯಾನ ಇಲ್ಲೆ"

"ಐ ಯಾಮ್ ವೆರಿ ಸಾರಿ ಸಾರ್. ಆ ಗೂಡೆಗೆ ಬಹುಶಃ ಹಿಂದೆದ್ ಎಲ್ಲಾ ಮರ್ತ್ ಹೋಗುಟ್ಟತ ಕಂಡದೆ. ಅವ್ಳ ಮೆದುಳಿಗೆ ಆಗಿರ್ವ ಶಾಕ್‌ಂದ ಅವ್ಳ ನೆನಪ್‌ನ ಶಕ್ತಿ ಹೊಗಿರ್ದೇ ಇದ್ಕೆ ಕಾರಣ. ಒಂದ್ ರೀತಿಲಿ ಇದ್ ನೀವ್‌ಗೆ ಸಹಾಯಾನೂ ಆದು"

* * * * *

ರಮ್ಯ ತನ್ನ ಗೆಳತಿಯರೊಟ್ಟಿಗೆ ಶಾಲೆಗೆ ವಾಪಾಸ್ ಬರ್ತಾ ಇತ್ತ್. ಗೂಡೆಗಳ ಕೈಲಿದ್ದ ಕಡ್ಲೆಕಾಯಿ ಅವರ ಸಂತೋಷನ ಎರಡ್ ಪಟ್ಟ್ ಮಾಡಿತ್ತ್. ಆಗ ಇದ್ದಕ್ಕಿದ್ದಂಗೆ ಹುಚ್ಚನೊಬ್ಬ ಇವರ ಹತ್ರ ಬಾಕನ ಎಲ್ಲವ್ಕೂ ಬಾಳ ಗಾಬರಿ ಆತ್. ಇವರ ಮುಖಗಳ್ನೇ ಅಂವ ದಿಟ್ಟ್‌ಸಿ ನೋಡಿ ಎಂತನೋ ಗೊಣಗ್‌ತಿತ್ತ್. ರಮ್ಯ ನಗೆ ತಡಿಯಕೆ ಆಗದೆ,

"ನೋಡ್, ಜಯ ಅದೆಂತೋ ಶಾಲಿನಿ, ಶಾಲಿನಿತ ಹೇಳ್ದ್. ಹುಚ್ಚಂಗೂ

ಲವ್ವರ್ ಉಟ್ಟುತ ಕಂಡದೆತೇಳಿ ನಗಾಡಿ ಅವನ ಕಡೆಗೆ ಕಡ್ಲೆಕಾಯಿನ ಬಿಸಾಕಿತ್. ಅಷ್ಟೊತ್ತಿಗೆ ಅಲ್ಲಿಗೆ ಬಂದ ಅಪ್ಪನ ಕಾರ್ ಹತ್ತಿ ಹೊರ್ಟು ಹೋತ್.

* * * * *

ಮದುವೆ ಮನೆ ತುಂಬಿ ತುಳುಕ್‌ತಿತ್ತ್. ಕೃಷ್ಣಪ್ಪನವು ತಮ್ಮ ಸಾಕು ಮಗಳ್ ರಮ್ಯನ ಮದ್ವೆನ ಗೌಜಿಲಿ ಮಾಡಿಕೆ ತಯಾರಿ ನಡ್ಸಿದ್ದೊ. ತಮ್ಮ ತಂಗೆ ಮಂಜ ಶ್ರೀಹರಿ ಮದ್ವೆ ಗಂಡ್ ಆಗಿದ್ರಂದ ಅವ್ಕೆ ಹೆಚ್ಚ್ ಕುಶಿ ಆಗಿತ್ತ್. ಮದ್ವೆ ಕಾರ್‌ಬಾರೆಲ್ಲಾ ಮುಗ್ದ್ ಹೆಣ್ಣ್ ಇಳ್ಸುವ ಕಾರ್ಯ ಬಾಕಿ ಇತ್ತ್. ಮದ್ವೆ ಬಾಳಾ ಲಾಯ್ಕ ಆತ್‌ತ ಎಲ್ಲವೂ ಹೊಗ್ಳಿಕಂಡ್ ಹೋದೊ. ಅಷ್ಟೊತ್ತಿಗೆ ಮದ್ವೆ ಮನೆಲಿ ಇದ್ದಕ್ಕಿದ್ದಂಗೆ ಗಲಾಟೆ ಶುರ್ ಆತ್.

ಇದ್ದಕ್ಕಿದ್ದಂಗೆ ಹುಚ್ಚನೊಬ್ಬ ಮದ್ವೆ ಮನೆಗೆ ನುಗ್ಗಿತ್ತ್. ಯಾರ್ ಎಷ್ಟ್ ತಡ್ದರೂ ಭೀಮನ ಬಲ ಬಂದವನಂಗೆ ನುಗ್ಗಿ ಬಾತಿತ್ತ್. ಜನ ಎಲ್ಲಾ ಗುಡ್ಡೆ ಸೇರ್ದೊ. ಕೆಲವು ಜನ ಕಲ್ಲ್ ಎಸ್ದೊ. ಇನ್ಯಾರೋ ನಾಯಿನ ಬುಟ್ಟೊ. ಹುಚ್ಚನ ಮೈಯಿಂದ ರಕ್ತದ ಹೊಳೆ ಹರ್ತ್. ಅಷ್ಟೊತ್ತಿಗೆ ಅಲ್ಲಿಗೆ ಬಂದ ಕೃಷ್ಣಪ್ಪನವು ಎಲ್ಲರ್ನ ತಡ್ದ್ ಅವಂಗೆ ಕರ್‍ಕೊಂಡೋಗಿ ಊಟ ಹಾಕ್ಸಿತ ಹೇಳ್ದೊ.

ಎಲ್ಲವೂ ನೋಡುತಿರ್ಕನ ಕುತೂಹಲ ತಡಿಯಕೆ ಆಗದೆ ಮದುಮಗ್ಳು ರಮ್ಯ ಅಲ್ಲಿಗೆ ಬಾತ್. ಹುಚ್ಚನ ಕೈಲಿ ಒಂದ್ ಹಳೆದಾದ ಫೋಟೋ ಇತ್ತ್. ಅದ್ ಗೂಡೆನ ಫೋಟೊ, ಅದನ್ನ ಅಂವ ಗಟ್ಟಿಯಾಗಿ ಹಿಡ್ಕಂಡಿತ್ತ್. ಬಟ್ಟೆನ ಸಣ್ಣ ಗಂಟ್‌ಲಿ ಸ್ವಲ್ಪ ಸಣ್ಣ ಕೂಸ್‌ನ ಬಟ್ಟೆಗ ಇದ್ದೊ. ಬಾಯಿಂದ 'ಶಾಲಿನಿ' ಶಾಲಿನಿತೇಳ್ವ ಹೆಸ್ರ್ ಮಾತ್ರ ಕೇಳ್ತಿತ್ತ್.

ರಮ್ಯ ಅಂವನ ಕೈಲಿದ್ದ ಫೋಟೊ, ಬಟ್ಟೆ ಎಲ್ಲಾ ನೋಡ್‌ತಿದ್ದಂಗೆ ಹಂಗೇ ನಿತ್ತೆ ಬುಡ್ತ್.

"ಶಾಲಿನಿ..." ಎಲ್ಲೋ ಯಾರೋ ಕರ್ದಂಗೆ ಆಗ್‌ತ್ತಿತ್ತ್. ಹತ್ರ ಹೋಗಿ ನೋಡ್ತ್. ಎಲ್ಲೋ ನೋಡ್ದ ಮುಖತ ಅನ್ಸ್‌ತ್ತಿತ್ತ್. ಬಟ್ಟೆಗಳ್ನ ಮುಟ್ಟಿ ನೋಡ್ತ್. ಅವ್ಳಿಗೆ ಮಸ್ಕ್ ಮಸ್ಕ್ ಆಗಿ ಅವ್ಳ ಕಣ್ಣ್ ಮುಂದೆ ತೇಲಿಹೋತ್ ನೆನಪುಗ.

"ಅಣ್ಣಾ..." ತೇಳಿ ಕಿರ್ಚಿ ರಮ್ಯ ಹುಚ್ಚನ ಮ್ಯಾಲೆ ಬೀತ್.

"ಶಾಲಿನಿ... ಶಾಲಿನಿ"ತ ಹುಚ್ಚ ಅವಳ್ನ ಜೋರಾಗಿ ತಬ್ಬಿಕಣ್ತ್. ಎಲ್ಲವೂ ಆಶ್ಚರ್ಯಲಿ ಮೂಕರಾಗಿ ಏನೂ ಅರ್ಥವಾಗದಂಗೆ ನೋಡ್‌ತಿರ್ಕನ ರಮ್ಯನ

ನೆನಪ್‌ನ ಶಕ್ತಿ ವಾಪಾಸ್ ಬಂದ್ ಅವ್ಳು ಸಾಗರ್‌ನ ಗುರ್‌ತಿಸಿತ್.

ಪರಿಸ್ಥಿತಿನ ಅರ್ತ್‌ಕಂಡ ಕೃಷ್ಣಪ್ಪನವು ಅವರ್ನ ಸಮಾಧಾನ ಪಡ್ಸಿದೊ. ಹುಚ್ಚನ ಮುಖಲಿ ತೃಪ್ತಿ ತುಂಬಿತ್ತ್. ಮುಖಲಿ ಮಾಸದ ನಗೆ ಮೂಡಿತ್ತ್. ಇದ್‌ಕ್ಕಾಗಿಯೇ ಇಷ್ಟರವರೆಗೆ ಕಾದಿದ್ದಂಗೆ ಜನರ ದಾಳಿಗೆ ಸಿಕ್ಕಿ ಜರ್ಝರಿತವಾಗಿದ್ದ ಅವನ ಶರೀರಂದ ಪ್ರಾಣ ಪಕ್ಷಿ ಹಾರಿ ಹೋಕೆ ತಯಾರಿ ನಡ್ಸಿತ್ತ್. 'ಶಾಲಿನಿ ಲಾಯ್ಕ ಇರ್...'ತೇಳ್ವಂಗೆ ಅಂವ ಎತ್ತಿದ ಕೈ ದಪ್‌ತ ಕೆಳಗೆ ಬೀತ್. ಅಣ್ಣನ ಮ್ಯಾಲೆ ಬಿದ್ದ್ ಮರ್ಡ್‌ತಿದ್ದ ರಮ್ಯನ ಎತ್ತಿ ಆಸರೆಯಾಗಿ ನಾನೊಳೆತೇಳುವಾಂಗೆ ಶ್ರೀಹರಿ ತನ್ನ ಎದೆಗೆ ವರ್ಗಿಸಿಕಂಡ್ ಸಮಾಧಾನ್ ಮಾಡ್ತ್.

* * * * *

## ವಿಪರ್ಯಾಸ

ನಿನ್ನೆವರೆಗೆ ಪಾದರಸನಂಗೆ ಚುರುಕಾಗಿ ಓಡಾಡಿಕೊಂಡಿದ್ದ ಸೋಮಯ್ಯನವು ಇಂದ್ ನೆರೆಕರೆಯವುಕೊಂದು ಒಗಟಾಗಿದ್ದೊ. ಶ್ರೀಮಂತರಾಗಿದ್ದ ಅವು ವಯಸ್ಸ್ ಅರವತ್ತ್ ಆಗಿದ್ದರೂ ಎಂದು ಸೋಮಾರಿಯಾಗಿ ಕುದ್ದವೇ ಅಲ್ಲ. ಬೆಳ್ಗಿನ ಜಾವಕ್ಕೆ ಎದ್ದು ತಮ್ಮ ದಿನಚರಿಯಲ್ಲಿ ತೊಡಗುತ್ತಿದ್ದೊ. ಇಂದ್ ಅವು ಮಂಕಾಗಿರ್‌ದಕ್ಕೆ ಕಾರಣ ಇಲ್ಲದೆ ಇತ್ಲೆ. ತಮ್ಮ ಸೊಸೆನ ಸ್ಥಿತಿ ಚಿಂತಾಜನಕವಾಗುಟ್ಟುತ ಮಂಜಂದ ರಾತ್ರಿ ತಾನೆ ಬಂದ ಫೋನ್ ಅವ್ರ ದುಃಖಕ್ಕೆ ಕಾರಣ ಆಗಿತ್ತ್.

* * * * *

ಇಪ್ಪತ್ತೈದು ವಯಸ್ಸಿಗೆ ಮೆಚ್ಚಿದವಳೊಟ್ಟಿಗೆ ಮದುವೆ ಆಗಿದ್ದ ಅವು ಸುಖದ ಸುಪ್ಪತ್ತಿಗೆಲಿ ತೇಲಾಡ್‌ಕಂಡ್ ಇರ್ಕನೆ 10 ವರ್ಷದ ಮಂಜ ಅನಂತನ ಅವ್ಕೆ ಒಪ್ಪಿಸಿ ಸೀತಮ್ಮ ವೆಂಕಟರಮಣನ ಪಾದ ಸೇರ್ಕಂಡಿದ್ದೊ. ಅಂದ್‌ಂದ ಅಪ್ಪ ಅವ್ವ ಎಡ್ರೂ ಆಗಿ ಅಂಗೈಲಿ ಇಟ್ಟ್‌ಕಂಡ್ ಮಂಜನ ಬೆಳ್ಸಿದ್ದೊ. ತಮ್ಮ ಜೀವಕ್ಕೆ ಜೀವ ಆಗಿದ್ದ ಸೀತನ ಜಾಗಕ್ಕೆ ಯಾರ್‍ನೂಸ ತಾಕೆ ಹಾಂಗೇ ಮಂಜಗೆ ಚಿಕ್ಕವ್ವನ ತಾಕೆ ಇಷ್ಟ

ಇಲ್ಲದೆ ವಿಧುರ ಆಗಿಯೆ ಇದ್ದೊ ಅವು. ಅನಂತ ಬೆಂಗ್ಳೂರ್‌ಲಿ ಹಾಸ್ಟೆಲ್‌ಲಿ ಇದ್ದ್‌ಕಂಡ್ ಓದ್‌ತಿತ್ತ್. ಬುದ್ಧಿವಂತನಾದ ಮಂಜ ಬ್ಯಾರೆ ಮಕ್ಕಳಂಗೆ ಆಗದೆ ಲಾಯ್ಕ ಓದಿ ಬಾಳ್‌ಲಿ ಮುಂದೆ ಬರಕುತೇಳಿ ಹಳ್ಳಿಯ ವಾತಾವರಣಂದ ದೂರ ಇಟ್ಟ್ ಸೋಮಯ್ಯನವು ಮಂಜನ ಓದಿಸ್ತಿದ್ದೊ. ಅಪ್ಪನ ಆಸೆನಂಗೆ ಅನಂತನು ಯಾವುದೇ ಕ್ಲಾಸ್ಲ ಮುಗ್ಗರಿಸದೆ ಲಾಯ್ಕ ಓದಿ ಮುಗ್ಸಿತ್ತ್.

ಆದರೆ ಒಟ್ಟಿಗೆ ತನ್ನ ಬಾಳ ಸಂಗಾತಿನೂ ಆರ್ಸಿಕಂಡಿತ್ತ್. ಇದ್ರಂದ ಸೋಮಯ್ಯನವುಕ್ಕೆ ಬಾಳ ನಿರಾಶೆಯಾಗಿತ್ತ್. ಸಣ್ಣದ್ರಂದೇ ತಮ್ಮ ವಿಧವೆ ತಂಗ್ಯೆನ ಮಗ್ಳ್ ರಾಧಿಕನೊಟ್ಟಿಗೆ ಮದುವೆ ಮಾಡ್ದುತ ಹಿರಿಯವೆ ತೀರ್ಮಾನ ಮಾಡಿದ್ದೊ.

ಆದರೆ ಕಷ್ಟಪಟ್ಟ್ ಹತ್ತನೆ ಕ್ಲಾಸ್ ಪಾಸು ಮಾಡಿಕೆ ಆಗದ ರಾಧಿಕನ ಬುದ್ಧಿಮಟ್ಟ ಮತ್ತೆ ತನ್ನ ಬುದ್ಧಿಮಟ್ಟಕಿರ್ವ ಒಂದು ಅಂತರ ಅನಂತನ ರಾಧಿಕಂದ ದೂರ ಮಾಡಿತ್ತ್. ಹಂಗೆ ಅಂವ ತನ್ನ ಕಾಲೇಜ್‌ನ ಗೆಳತಿ ನಳಿನಿಯೊಟ್ಟಿಗೆ ಮದುವೆ ಆಗಿತ್ತ್.

ಇಂದಿನ ಕಾಲದ ಹಂಗೆ ಮಂಜನ ಆಸೆಗೆ ಸಂತೋಷಕ್ಕೆ ಅಡ್ಡಿ ಮಾಡದೇ ಸೋಮಯ್ಯನವು ಒಪ್ಪಿಗೆ ಕೊಟ್ಟರೂ ರಾಧಿಕ ಅವ್ರ ಮನ್ಸ್‌ಲೇ ಉಳ್ದ್‌ಬಿಟ್ಟಿತ್ತ್.

ಅನಂತ ಮತ್ತು ನಳಿನಿನವು ಹಳ್ಳಿನ ನಿಸರ್ಗದ ಸವಿನ ಅಲೆದಲೆದು ಸವಿದೊ. ಪಟ್ಟಣದ ವಾತಾವರಣಲಿ ಬೆಳ್ದಿದ್ದ ನಳಿನಿಗೆ ಹಳ್ಳಿನ ಪೊರ್ಲು ಹುಚ್ಚ್ ಹಿಡ್ಸವಂಗೆ ಇತ್ತ್. ಬರ್ತಾ ಬರ್ತಾ ದಿನ ಕಳ್ದಂಗೆ ನಳಿನಿ ಸೋಮಯ್ಯನವರ ಮನ್‌ಸ್‌ನ ಗೆದ್ದಿತ್ತ್. ಅವರ ಅಸಮಾಧಾನ ದೂರವಾಗಿತ್ತ್. ಸೋಮಯ್ಯನವು ಅವ್ಳನ ಮಗಳಾಂಗೆ ಆಧರಿಸ್ತಿದ್ದೊ. ತಮಗೆ ಸಂಗಾತಿಯಾಗಿ ಮೊಮ್ಮಂಜ ಶ್ಯಾಂ ಬಾಕನ ಅವರ ಖುಸಿಗೆ ಪಾರವೇ ಇತ್ಲೆ. ಕೂಸ್‌ನೊಟ್ಟಿಗೆ ಅವು ಕೂಸಾಗಿ ತಮ್ಮ ಎಲ್ಲಾ ಬ್ಯಾನೆಗ್ಳನ ಮರ್‍ತೊ.

ಎರಡ್ನೇ ಕೂಸ್‌ನ ಹೆರಿಕೆ ತವರಿಗೆ ಹೋಗಿದ್ದ ನಳಿನಿನ ಸ್ಥಿತಿ ಚಿಂತಾಜನಕವಾಗುಟ್ಟುತ ಕೇಳಿ ಸೋಮಯ್ಯನವು ಆಕಾಶವೇ ಕಳ್ಚಿ ಬಿದ್ದಂಗೆ ಕುಸ್ತು ಹೋದೊ.

* * * * *

ಮಂಜ ಸೊಸೆ ಮತ್ತೆ ಹೊಸ ಕೂಸ್‌ನ ಪಾರ ಕಾಯತ್ತಿದ್ದ ಸೋಮಯ್ಯನವು ಹೆಣ್ಣ್ ಮತ್ತೆ ಕೂಸ್‌ನ ಕಳ್ಕಂಡ್ ಶ್ಯಾಂನೊಟ್ಟಿಗೆ ಬಂದ ಅನಂತನ ನೋಡಿ ಸಣ್ಣ

ಮಕ್ಕಳಂಗೆ ಮರ್ರ್ಬುಟ್ಟೊ. ಅನಂತು ಹುಚ್ಚನಂಗೆ ಆಗಿ ಹೋಗಿತ್ತ್. ಶ್ಯಾಂನ ನೋಡಿಕಂಬವೇ ಇಲ್ಲವಾಗಿದ್ದೊ.

ಇದೇ ಸಮೆಲಿ ಸೋಮಯ್ಯನವರ ತಂಗೆ ಮತ್ತೆ ರಾಧಿಕ ಬಂದಿಳ್ದೊ. ದಿನ ಕಳ್ದಂಗೆ ಮನೆನ ಎಲ್ಲಾ ಜವಾಬ್ದಾರಿನೂ ತಕಂಡೊ. ಹೆಣ್ಣ್ ದಿಕ್ಕ್ ಇಲ್ಲದ ಮನೆಲಿ ಇವರ ರಾಜ್ಯಭಾರ ಸುರು ಆತ್.

ರಾಧಿಕ ಶ್ಯಾಂನ ಬಾಳಾ ಕುಶಿಲಿ ಪ್ರೀತಿಂದ ನೋಡಿಕಂಡಂಗೆ ನಾಟಕ ಮಾಡ್ತಿತ್ತ್. ಇದ್ರಿಂದ ಸೋಮಯ್ಯನವ್ಕೆ ಬಹಳ ಕುಶಿ ಆತ್. ಅವ್ರ ಮನ್ಸ್‌ಲಿ ಮಧುರವಾದ ಭಾವನೆಯೊಂದ್ ಸುಳಿದಾಡ್ತಿತ್ತ್.

ರಾಧಿಕಾನ ಮನ್‌ಸ್‌ಲಿ ಅನಂತನ ಕಡೆ ಮುರುಟಿ ಹೋಗಿದ್ದ ಕನಸ್‌ನ ಬಳ್ಳಿ ಚಿಗುರಿಕೆ ಶುರು ಆಗಿತ್ತ್. ಅವ್ವು ಅನಂತನ ತನ್ನ ಕಡೆಗೆ ಸೆಳಿಯಕೆ ಪ್ರಯತ್ನ ಮಾಡ್ತಾ ಇತ್ತ್. ಆದರೆ ಅನಂತ ಮಾತ್ರ ಸ್ಥಿತ ಪ್ರಜ್ಞನಂಗೆ ಇತ್ತ್.

ಸೋಮಯ್ಯನವು ದಿನಂದ ದಿನಕ್ಕೆ ರಾಧಿಕಂಗೆ ಬಾಳ ಹೊಂದಿಕೊಂಡೊ. ಬರ್ತಾ ಬರ್ತಾ ಅನಂತಂಗೂ ರಾಧಿಕ ತನಿಗೆ ಮತ್ತೆ ಶ್ಯಾಂಗೆ ಮಾಡ್ತಿದ್ದ ಆರೈಕೆಗ ಕಣ್ಣಿಗೆ ಕಾಂಬಕ್ಕೆ ಸುರು ಆತ್.

ಸೋಮಯ್ಯನವು ಮಂಜಗಾಗಿಯಾದ್ರೂ ರಾಧಿಕಾನ ಮದ್ವೆ ಆಗುತ ಅನಂತಂಗೆ ಒತ್ತಾಯ ಮಾಡ್ತಿದ್ದೊ. ಅನಂತು ಸ್ಪಷ್ಟವಾಗಿ ತನ್ನ ನಿರ್ಧಾರ ತಿಳಿಸದೇ ನಿಮ್ಮಿಷ್ಟತೇಳ್ತ್. ಅಷ್ಟೇ ಸಾಕ್‌ತ ಕಾದಿದ್ದ ಅಪ್ಪ ತಂಗೆನೊಟ್ಟಿಗೆ ಮದ್ವೆ ವಿಷ್ಯ ಮಾತಾಡ್ದೊ.

ಅಣ್ಣನ ಆಸ್ತಿನ ಮ್ಯಾಲೆ ಕಣ್ಣ್ ಮಡ್ಗಿದ್ದ ತಂಗೆ ಜಾನಕಿ ಕುಸಿಲೇ ಒಪ್ಪಿಕಂಡತ್.

* * * * *

ಮದ್ವೆ ಆದ ಮ್ಯಾಲೆ ರಾಧಿಕಾನ ನಿಜರೂಪ ಬಯಲಾಕೆ ಸುರು ಆತ್. ಶ್ಯಾಂ ಮ್ಯಾಲೆ ಇದ್ದ ಕೃತಕ ಪ್ರೀತಿ ಕಮ್ಮಿಯಾತ್. ಅವ್ಳಿಗೆ ತಾನು ತನ್ನ ಗಂಡ, ಮನೆ ಇಷ್ಟೆ ಇರಕೂತ ಬಾಳ ಆಸೆ ಇತ್ತ್. ಶ್ಯಾಂನ ತುಂಟಾಟ ಅವ್ಳ ಕೈಲಿ ಸಹಿಸಿಕೆ ಆಗ್ತಿತ್ತೆ.

ಅನಂತ ಆಸ್ತಿನ ಜವಾಬ್ದಾರಿ ವಹಿಸಿಕಂಡ ಮ್ಯಾಲೆ ಅಂವ ತೋಟ ಗದ್ದೆತ ಜಾಸ್ತಿ ಹೊರಗೆ ಕಳಿಯತಿತ್ತ್. ಅದಲ್ಲದೇ ಅಂವಂಗೆ ಮನೆ ವಿಚಾರಲಿ ಮುಂದೆನ ಆಸಕ್ತಿ ಇತ್ತ್‌ಲೆ.

ಒಂದೆರ್ಡ್ ವರ್ಷ ಕಳಿಯಕನ ತನಿಗೆ ಒಂದು ಕೂಸು ಆಕನ ರಾಧಿಕಂಗೆ

ಶ್ಯಾಂನ ಮ್ಯಾಲೆ ಇದ್ದ ಅಲ್ಪಸ್ವಲ್ಪ ಪ್ರೀತಿ ಸಹ ಇಲ್ಲದಾತ್. ಮನೆನ ಪೂರ್ತಿ ಜವಾಬ್ದಾರಿ ಅವಳೇ ತಕಂಡ್‌ಬುಡ್ತ್. ಅವ್ಳೀಗ ಮನೇಲಿ ಮಹಾರಾಣಿನಂಗೆ ಮೆರಿತ್ತಿತ್.

ಸೋಮಯ್ಯನವು ಮೂಕರಾಗಿ ಬ್ಯಾನೆ ಪಡ್ತಿದ್ದೊ. ತಾವಾಗಿ ತಂದ್‌ಕಂಡ ಗಂಡಾಂತರ ಇದ್ ಆಗಿತ್ತ್. ತಾವಾಗಲೀ ಅನಂತು ಆಗಲೀ ಏನಾರೆ ಮಾತಾಡ್ರೆ ಮನೆಲಿ ಕುರುಕ್ಷೇತ್ರ ನಡಿತ್ತಿತ್.

ಶ್ಯಾಂಗೆ ಈಗ ಹನ್ನೆರಡ್ ವರ್ಷ, ಅರುಣಂಗೆ ಆರು ವರ್ಷ ಆಗಿತ್ತ್. ಅರುಣಂಗೆ ಶ್ಯಾಮಣ್ಣತೇಲ್ರೆ ಬಹಳ ಇಷ್ಟ. ಅವಂಗೆ ಅಂವ ಒಂದು ನಿಧಿ ಆಗಿತ್ತ್. ತನ್ನ ಸಮಯನೆಲ್ಲಾ ಅಂವ ಅಣ್ಣನೊಟ್ಟಿಗೆ ಕಳಿಯತಿತ್. ತನ್ನ ಅಮ್ಮ, ಅಣ್ಣಂಗೆ ಸದಾ ಬೈಯ್ಕಂಡ್, ಹೊಡ್ಕಂಡ್ ಇರ್ರುದನ ಕಂಡ್ ಅವ್ನ ಮನ್ಸ್ ಬಾಳಾ ದುಕ್ಕ ಪಡ್ತಿತ್.

ಅರುಣ, ಶ್ಯಾಮಣ್ಣ ಅಳ್ಬಡ ನಾನ್ ಅಮ್ಮಂಗೆ ನಿಂಗೆ ಹೊಡಿಬ್ಯಾಡತ ಹೇಳ್ನೆತೇಳಿ ಸಮಾಧಾನ ಮಾಡ್ತಿತ್. ಇದರ್‌ಂದ ಶ್ಯಾಂನ ಕಣ್ಣೀರ್ ಜಾಸ್ತಿ ಆಗ್ತಿತ್ತೆ ಹೊರತು ಕಮ್ಮಿ ಆಗ್ತಿತ್‌ಲೆ. ದಿನ ಕಳ್ದಂಗೆ ಒಣಗಿಕಂಡ್ ಬರ್ತಿದ್ದ ಶ್ಯಾಂನ ಕಂಡ್ ಸೋಮಯ್ಯನವು ಬಾಳಾ ಮರುಗುತ್ತಿದ್ದೊ. ಇದೇ ಗ್ಯಾನಲಿ ಅವು ಹಾಸಿಗೆ ಹಿಡ್ದೊ. ತನ್ನ ಗೆಳೆಯ ಲಾಯರ್ ಭೀಮಯ್ಯನ ಕರ್ದ್ ತಮ್ಮ ಆಸ್ತಿನ ಹೆಚ್ಚ್ ಪಾಲ್‌ನ ಶ್ಯಾಂನ ಹೆಸರ್‌ಗೆ ಮಾಡ್ದೊ. ಇದಾದ ಮ್ಯಾಲೆ ಅವು ಹೆಚ್ಚು ದಿನ ಬದಿಕಿತ್ಲೆ.

ತಾತ ಸತ್ತ ಮ್ಯಾಲೆ ಶ್ಯಾಂಗೆ ಇದ್ದ ಒಂದ್ ಆಧಾರಸ್ಥಂಬ ಸಹ ಕಳ್ಚಿ ಬಿದ್ದ್‌ಹೋತ್. ಚಿಕ್ಕವ್ವನ ಅಟ್ಟಹಾಸಕ್ಕೆ ಮಿತಿ ಇತ್ತ್‌ಲೆ. ಅನಂತು ಮನೆಲಿ ಇರ್ಕನ ಅವ್ಳು ಬಾರಿ ಮೆತ್ತಂಗೆ ಇರ್ತಿತ್. ಇದ್ರಂದ ಅವಂಗೆ ಅಷ್ಟೇನೂ ಗೊತ್ತಾಗ್‌ತಿತ್ಲೆ.

ಮಾವ ಆಸ್ತಿನ ಹೆಚ್ಚ್ ಪಾಲ್ ಶ್ಯಾಂನ ಹೆಸರ್‌ಗೆ ಮಾಡ್ದ್ ಗೊತ್ತಾದ ಮ್ಯಾಲೆ ಅವ್ಳ ಸಿಟ್ಟಿಗೆ ತುಪ್ಪ ಸುರ್ದಂಗೆ ಆಗಿತ್ತ್. ಶ್ಯಾಂನ ಪಾಲಿಗೆ ಮನೆ ನರಕದಂಗೆ ಆಗಿತ್ತ್. ಮನೆಲಿ ಹೆಚ್ಚಿನ ಕೆಲ್ಸ ಎಲ್ಲಾ ಅವನ ಪಾಲಿಗೆ ಇತ್ತ್. ಮನೆ ಕೆಲ್ಸದವಳ್ನ ರಾಧಿಕಾ ಜಗಳ ಮಾಡಿ ಕಳ್ಸಿಬುಟ್ಟಿತ್. ಹೊಟ್ಟೆ ತುಂಬ ಊಟ ಸಹ ಹಾಕ್ತಿತ್‌ಲೆ. ಅಂವ ಅನಂತನೊಟ್ಟಿಗೆ ಇರ್ಕನ ಸ್ವಲ್ಪ ಜಾಸ್ತಿ ತಿಂದ್‌ಬುಟ್ಟ್‌ರೆ ಅನಂತ ಅತ್ತ ಹೋಕನ ರಂಪ ಸುರು ಆಗ್ತಿತ್.

ಅವು ಸಂಪಾದ್ನೆ ಮಾಡ್ದೆಲ್ಲಾ ನಿನ್ನ ಹೊಟ್ಟೆಗೆ ಆತ್. ನನ್ನ ಮಕ್ಕಳ ಕೆಲ್ಸನೇ

ನೂರೆಂಟ್ ಇದ್ದದೆ. ಅದರೊಟ್ಟಿಗೆ ನಿನ್ನ ಚಾಕರಿ ಬೇರೆ ಮಾಡಕು. ಎಲ್ಲಾರ್ ಹೋಗಿ ಸಾಯಕೇನ್. ಇಡೀ ಮನೆಗೆ ತಾನೇ ಸರ್ವಾಧಿಕಾರಿಣಿತೇಳ್ದಂಗೆ ಈ ಆಸ್ತಿ ಪೂರ ತನ್ನ ಮಕ್ಕಳಿಗೆ ಮಾತ್ರತೇಳ್ದಂಗೆ ಅವ್ವು ಚುಚ್ಚು ಮಾತ್ ಆಡ್ತಿತ್ತ್.

ಇದೆಲ್ಲಾ ತಮ್ಮ ಅರುಣಂಗೆ ಸಹಿಸಿಕೆ ಆಗ್ತಿತ್‌ಲೆ. ಆದರೆ ಅಮ್ಮನ ಎದ್ರು ಬಾಯಿಬುಟ್ಟ್ ಹೇಳಿಕೆ ಆದುಲೆ. ಅಂವ ತನಿಗೆ ಕೊಟ್ಟ ತಿಂಡಿನ ಕದ್ದ್‌ಮುಚ್ಚಿ ತಂದ್ ಶ್ಯಾಂಗ್ ಕೊಡ್ತಿತ್ತ್. ತಂಗೆ ಮಾತ್ರ ಅಮ್ಮನ ಪಡಿಯಚ್ಚ್. ಇದನ್ನೆಲ್ಲಾ ಅಮ್ಮಂಗೆ ವರದಿ ಒಪ್ಪಿಸ್‌ತಿತ್ತ್.

ಅರುಣ, "ಅಮ್ಮ ಶ್ಯಾಮಣ್ಣಂಗೆ ಹೋಡಿಬೇಡಮ್ಮ"ತ ಮರ್ಡ್‌ತಿತ್ತ್.

"ಆ ಪರದೇಶಿನ ಇನ್ನೊಮ್ಮೆ ಶ್ಯಾಮಣ್ಣತ ಕರ್ದರೆ ನಿನ್ನ ನಾಲಿಗೆ ಸೀಳಿ ಬುಟ್ನೆತ ಕಟ್ಟಪ್ಪಣೆ ಮಾಡ್ತ್. ಆ ಮೇಲಿಂದ ಅಮ್ಮನ ಎದುರ್ ಶ್ಯಾಮಣ್ಣತ ಕರಿಯುವ ಸಂತುಷ್ಟಿನೂ ಅರುಣಂಗೆ ಇಲ್ಲವಾತ್.

ಒಂದ್ ದಿನ ಆರಾಮಾಗಿ ಕುರ್ಚಿಲಿ ಕುದ್ದಿದ್ದ ಅಪ್ಪನ ಹತ್ರ ಬಂದ ಅರುಣ, "ಅಪ್ಪ ನಾನೊಂದ್ ಕೇಳ್ನೆ"ತೇಳ್ತ್.

"ಕೇಳ್ ಮರಿ, ಅದೆಂತಪ್ಪ" ಅನಂತ ಕೇಳ್ತ್.

"ನೀನ್ ನಂಗೆ ಹೊಡೆಯಲೆ, ಅಣ್ಣಂಗೆ ಮಾತ್ರ ಯಾಕಪ್ಪ ಹೊಡ್ದಿಯಾ, ಮೊನ್ನೆ ತುಪ್ಪದ ಬಾಟ್ಲ್ ನಾನ್ ಒಡ್ದದ್, ಅಮ್ಮ ಅಂವನ ಮ್ಯಾಲೆ ಹಾಕಿತ್‌ತ ನೀನ್ ಪಾಪ ಅಣ್ಣಂಗೆ ಹೊಡ್ದ"

"ಹೌದು ಅರುಣ ತಪ್ಪಾತ್, ನಂಗೆ ಮತ್ತೆ ಗೊತ್ತಾತ್"

"ಇನ್ನ್ ಮುಂದೆ ಅಣ್ಣಂಗೆ ಹೊಡಿಬ್ಯಾಡಪ್ಪಾ"

"ಆತಪ್ಪಾ"

"ನಂಗೆ ಶ್ಯಾಮಣ್ಣನ ಕಂಡರೆ ಬಾಳ ಇಷ್ಟ ಅಪ್ಪಾ, ನಿಂಗೆ ಯಾಕೆ ಇಲ್ಲೆ."

"ಹೌದು ಕಂದಾ ಇನ್ನ್ ಮುಂದೆ ಅವಂಗೆ ಹೊಡಿಯಲೆ" ಅನಂತನ ಕಣ್ಣ್‌ಂದ ಹನಿ ಜಾರಿತ್.

"ಅಪ್ಪ, ಅಮ್ಮಂಗೆ ಅವನ ಕಂಡರೆ ಆದುಲೆ, ಯಾಗೊಳೂ ಹೊಡ್ದವೆ. ಅಪ್ಪ, ಅಮ್ಮ ಬರೀ ಸುಳ್ಳು ಹೇಳ್ದೆ, ನೀನ್ ಅಮ್ಮನ ಮಾತ್‌ನ ನಂಬುಬ್ಯಾಡಪ್ಪ"

"ಹೌದು ಕೂಸು, "ಆದರೆ ಏನ್ ಮಾಡ್ದು ಹೇಳ್"

"ಅಮ್ಮ ನನ್ನ ಮಾತಾಡ್ಸಿದಂಗೆ ಅಣ್ಣನ ಯಾಕೆ ಮಾತಾಡ್ಸುದುಲೆ ಅಪ್ಪಾ," "ಶ್ಯಾಮಣ್ಣ ಅವಳ ಮಂಜ ಅಲ್ಲಪ್ಪ, ಅವನ_ಅಮ್ಮ ದೇವ್ರರತ್ರ ಹೋಗುಟ್ಟು.

ಅರುಣಂಗೆ ದುಃಖ ತಡಿಯಕೆ ಆಗದೆ ಬಿಕ್ಕಿ ಬಿಕ್ಕಿ ಮರ್‍ಬತ್"

ಅನಂತ ಸಹ ಕಣ್ಣೀರ್ ವರ್‍ಸಿಕಂಡ್ ಒಳಗೆ ಹೋತ್. ಅಂವಂಗೆ ರಾಧಿಕಾನ ಎದ್ರು ವಾದಿಸೋಕ್ಕೆ ಆಗ್‌ತಿತ್ಲೆ. ಅವ್ಳು ಆ ಮಟ್ಟಕ್ಕೆ ಮನೆಲಿ ರಾಜ್ಯಭಾರ ಮಾಡ್ತಿತ್ತ್. ಅನಂತ ಅವ್ಳ ಕೈಗೊಂಬೆ ಆಗಿ ಬುಟ್ಟಿತ್.

* * * * *

ಒಮ್ಮೆ ವ್ಯವಹಾರದ ಮ್ಯಾಲೆ ಅನಂತಂಗೆ ಬೆಂಗಳೂರಿಗೆ ಹೋಕಾಗಿತ್ತ್ ನಾಲ್ಕೈದು ದಿನಲಿ ಬನ್ನೆತ ಹೇಳಿ ಅಂವ ಹೊರ್‍ಬತ್. ಶ್ಯಾಂ ಮತ್ತೆ ಅರುಣನ ಕರ್‍ದ್ ಲಾಯ್ಕಲಿ ಇರಿತ ಹೇಳಿ ಅಂವ ಹೊರ್‍ಬತ್. ಶ್ಯಾಂಗೆ ಬಾಳ ದುಃಖ ಆತ್. ಇನ್ನ್ ಚಿಕ್ಕವ್ವನ ಕೈಲಿ ಏನೆಲ್ಲಾ ಅನುಭವಿಸಕೂತ ಹೇಳಿ ಅವನ ಕಣ್ಣ್‌ಂದ ನೀರ್ ಬಾತ್.

ಅನಂತ ಅತ್ತ ಹೋದ್ದೇ ತಡ ಶ್ಯಾಂನ ಮ್ಯಾಲೆ ಹಲ್ಲ್ ಕಚ್ಚ್‌ತಿದ್ದ ಚಿಕ್ಕವ್ವ ಒಂದರ ಮ್ಯಾಲೆ ಇನ್ನೊಂದುತ ಕೆಲ್ಸಗಳ್ನ ಹೇಳಿಕೆ ಸುರು ಮಾಡ್ತ್. ಅರುಣನ ಶ್ಯಾಮಣ್ಣ ಬಾಳಾ ದೀನನಾಗಿತ್ತ್. ಮನೆ ಕೆಲ್ಸ ಮಾಡಿ ಅವನ ಕೈ ಸೋತ್ ಹೋಗಿತ್ತ್. ಅವನ ಅಮ್ಮ ಬ್ಯಾರೆ ಜಾತಿಯವಳಾಗಿದ್ರಂದ ಅವಳ ಕಡೆಯವ್ರು ಯಾರ್ ಇತ್ತ ಸುಳಿಯಕೆ ರಾಧಿಕಾ ಬುಡ್ತಿತ್ಲೆ.

ಅದ್ಕೇ ಹೇಳ್ದು ವಯಸ್‌ಲಿ ಲಾಯ್ಕ ಇರ್‍ಕನ ಮಾತ್ರ ಎಲ್ಲಾ ನಡ್ದದೆ. ಅವುಕವುಕೆ ಅವರವರ ಜಾತಿಲಿ ಮದ್ವೆ ಆದೇ ಒಳ್ಳೆದ್. ಇಲ್ಲದಿದ್ದರೆ ಮಕ್ಕಳ ಬಾಳ್ ನರಕ ಆಗಿ ಹೋದೆ. ಅಪ್ಪ, ಅವ್ವ ಇದ್ದರೂ ಮದ್ವೆ ವಯಸ್ಸಿಗೆ ಬಾಕನ ಜಾತಿ ಪ್ರಶ್ನೆ ಬಂದೇ ಬಂದದೆ. ಪ್ರತಿಯೊಬ್ಬನು ಮದ್ವೆಗೆ ಹೆಣ್ಣ್ ಗಂಡ್ ನೋಡ್ಕನ ಅವ್ವನ ಹಿನ್ನೆಲೆನ ಮೊದ್ಲು ನೋಡಿವೆ. ಹಂಗೆತೇ "ಜಲ ನೋಡಿ ಬಾವಿ ತೆಗಿ ಕುಲ ನೋಡಿ ಹೆಣ್ಣು ತರಕುತ" ಗಾದೆ ಉಟ್ಟು.

ಸಣ್ಣ ವಯಸ್ಸಿನ ಮಕ್ಕಳಲಿ ಇರ್‍ವ ಎಲ್ಲಾ ಚಟುವಟಿಕೆಗ ಶ್ಯಾಂನಲ್ಲೂ ಇದ್ದೊ. ಈ ಚಟುವಟಿಕೆ ಕೆಲವೊಮ್ಮೆ ಸಣ್ಣಪುಟ್ಟ ತಂಟೆಯಾಗಿ ಕಾಂಬತಿತ್ತ್. ಹನ್ನೆರಡ್ ವರ್ಷದ ಮಕ್ಕಳ್‌ಲಿ ಇರ್‍ವ ಎಲ್ಲಾ ಗುಣಗ ಹಂಗೇ ದೋಷಗ ಸಹ ಅವನಲಿ ಇದ್ದೊ. ಇದ್ ಚಿಕ್ಕವ್ವಂಗೆ ಸಹಿಸಿಕೆ ಆಗ್ತಿತ್‌ಲೆ. ಪ್ರಾಯ ಹನ್ನೆರಡ್ ಆದರೂ ಗಂಭೀರವಾಗಿ ಇರಕುತ ಅವ್ಳು ಕಟ್ಟಪಣೆ ಮಾಡಿತ್ತ್. ಹಿಂಗಾಗಿ ಅಪ್ಪ ಅತ್ತ ಹೋದ ಮ್ಯಾಲೆ ಅಂವಂಗೆ ಕಿರುಕುಳ ತಪ್ಪಿತ್‌ಲೆ.

ರಾಧಿಕಾನ ಮಕ್ಕ ಅರುಣ ಮತ್ತೆ ಕಾಂತಿ ಸಮೃದ್ಧಿಲಿ ತಿಂದ್ ಉಂಡ್ ಬೆಳಿತಿದ್ದೊ. ಆಗಾಗ್ಗೆ ಅರುಣ ಕದ್ದ್ ಮುಚ್ಚಿ ತಂದ್ ಕೊಡ್ತಿದ್ದ ತಿಂಡಿ ಬುಟ್ರೆ ಶ್ಯಾಂ ತಿಂಡಿ ಕಾಂಬದೆ ಬಾಳಾ ಸಮಯ ಆಗಿತ್ತ್.

ನಾಳೆ ಅನಂತ ವಾಪಾಸ್ ಬನ್ನೆತ ಫೋನ್ ಮಾಡಿತ್ತ್. ಅಂದ್ ಶ್ಯಾಂಗೆ ಇಸ್ಕೂಲ್‌ಲಿ ವಾರ್ಷಿಕೋತ್ಸವ ಇತ್ತ್. ಅವನ ಪ್ರೋಗ್ರಾಮ್ ಮುಗಿಯಕನ ಕತ್ತಲೆ ಆಗಿ ಬುಟ್ಟಿತ್ತ್. ಸಣ್ಣ ಮಕ್ಕಳಿಗೆ ರಜೆ ಇದ್ರಂದ ಇಂವ ಒಬ್ಬನೇ ಆಗಿತ್ತ್.

ಚಿಕ್ಕವ್ವ ಇವನ ದಾರಿ ಕಾದ್‌ಕಂಡ್ ನಿತ್ತಿತ್ತ್. "ಬಂದಾ ಮಂಜತಾ ಮುದ್ದು ಮಾಡಿಕೆ ಅಲ್ಲ, ರಾಶಿ ಬಿದ್ದಿದ್ದ ಕೆಲ್ಸ ಮಾಡಿಕೆ!!

ಅರುಣನ ಉಂಬಕೆ ಕರ್ದರೆ, ಶ್ಯಾಮಣ್ಣ ಬಂದ ಮ್ಯಾಲೆ ಉಂಡನೆತ ಅಂವ ಊಟಕೆ ಬಾತ್‌ಲೆ. ಅವನ ಎಳ್ಕಂಡ್ ಬಂದ್ ಅವನ ಬಾಯಿಗೆ ಅನ್ನ ತುರುಕಿತ್ತ್. ಅರುಣಂಗೆ ಅನ್ನ ಇಳ್ತ್‌ಲೆ, ಮರ್ಟ್‌ಕಂಡೇ ಎರ್ಡುಬಾಯಿ ತಿಂದತ್, ಒಟ್ಟಿಗೆ ಅಮ್ಮನ ಪೆಟ್ಟ್.

ಕಡೆಗೆ ತಾನ್ ಉಂಡ್, ಆ ಮಾರಿ ಬಾರದಿದ್ದರೆ ಸಾಯಲೀತ ಬಾಗ್ಲ್ ಹಾಕಿ ಮಲ್ಗಿತ್. ನಾಡ್‌ಕಡೆ ಏಳುವರೆ ಗಂಟೆಗೆಲ್ಲಾ ಉಂಡ್ ಮಲ್ಗಿ ಬುಟ್ಟವೆಲ್ಲಾ, ಇವ್ಕೂ ಅದೇ ಅಭ್ಯಾಸ ಆಗಿತ್ತ್.

ವಾರ್ಷಿಕೋತ್ಸವಲಿ ಶ್ಯಾಂ ಒಂದ್ ನಾಟ್ಕಕ್ಕೆ ಸೇರಿತ್ತ್. ಅದನ್ನ ಕಡೆಲಿ ಮಡ್ಗಿದ್ರಂದ ಅಂವ ಮನೆಗೆ ಬಾಕನ ಗಂಟೆ ಎಂಟ್ ಆಗಿಬುಟ್ಟಿತ್. ಎಲ್ಲಾ ಮಕ್ಕಳೊಟ್ಟಿಗೆ ಅವ್ರ ಅಪ್ಪ ಅಮ್ಮಂದರ್ ಸಹ ಶಾಲೆಗೆ ಬಂದಿದ್ದೊ. ಇವಂಗೆ ಆ ಭಾಗ್ಯ ಇತ್ತ್‌ಲೆ. ಅವನ ನೆರೆಮನೆ ಮಕ್ಕ ಇದ್ರಂದ ಅವರೊಟ್ಟಿಗೆ ಇಂವ ಮನೆಗೆ ಬಾತ್.

ಚಿಕ್ಕವ್ವ ಏನ್ ಹೇಳ್ದೇನೋತ ಹೆದ್ರಿಕೆಲಿ ಗಡಗಡ ನಡ್‌ಗಿಕಂಡ್ ಮನೆ ಬಾಗ್ಲ್‌ವರೆಗೆ ಬಂದವಂಗೆ ಬಾಗ್ಲ್ ಬಡಿಯಕೆ ಧೈರ್ಯನೆ ಬಾತ್‌ಲೆ. ಹೊರಗೆ ಮಲ್ಗನೋತೇಳ್ರೆ ಹೊಟ್ಟೆ ಹಸ್ದ್ ಪ್ರಾಣ ಹೋದಂಗೆ ಆಗಿತ್ತ್. ಕಡೆಗೆ ಎದೆ ಗಟ್ಟಿಮಾಡಿಕಂಡ್ ಬಾಗ್ಲ್ ತಟ್ಟಿತ್ತ್.

ಅರ್ಧಗಂಟೆ ಕಳ್ದ ಮ್ಯಾಲೆ "ಯಾರದ್"ತೇಳ್ವ – ಕೆಮಿ ಒಡ್ದು ಹೋದಂಗೆ ಸ್ವರ ಕೇಳ್ತ್. ಸ್ವರಕಿಂತ ಹುಲಿನಂಗೆ ಗರ್ಜನೆ ಮಾಡ್ತ್. "ನಿಂಗೆ ಇಷ್ಟ ಬಂದಂಗೆ ಬಾಕೆ ಇದೇನ್ ಧರ್ಮಛತ್ರತ ಗ್ಯಾನ ಮಾಡ್ದ"

"ಇಲ್ಲೆ ಚಿಕ್ಕವ್ವ, ಶಾಲೆಲಿ ನಾಟಕ ಇತ್. ನಾನ್ ಬ್ಯಾಡತೇಳ್ರು ಟೀಚರ್ ನನ್ನ

ಬುಟ್ಟಿತ್‌ಲೆ. ಚಿಕ್ಕವ್ವಂಗೆ ತೊಂದರೆ ಆದೆತ ನಾನ್ ಹೇಳ್ದೆ"

"ಹಂಗಾರೆ ಆ ಟೀಚರ್ ಮನೆಗೆ ಹೋಗ್ ತಿಂಬಕೆ ಇಲ್ಲಿಗ್ಯಾಕೆ ಬಂದ"

"ಕ್ಷಮಿಸಿ, ಚಿಕ್ಕವ್ವ ಇನ್ನ್ ಮುಂದೆ ಹಿಂಗೆ ಮಾಡ್ದುಲೆ"

"ನಿನ್ನ ಅಪ್ಪಂಗೆ ಮುಂದೆನೇ ಹೇಳಿದ್ದೆ. ನಿಮ್ಮ ಮಂಜತೇಳ್ರೆ ನಂಗೆ ಹಿಡ್ದ ಪೀಡೆತ, ಒಂದೋ ನಾನ್ ಇರಕು, ಇಲ್ಲಾ ನೀನ್ ಇರಕುತ ಎಂತದೋ ಗ್ಯಾನ ಮಾಡಿಕಂಡ್ ಮೆಲ್ಲೆ ಗೊಣ್ಗಿಕಂಡ್ ಬಾಗ್ಲ್ ತೆಗ್ತ್.

ಒಳಗೆ ಬಾಕೆ ಜಾಗ ಸಿಕ್ಕಿದೇ ತಡ ಹೊಟ್ಟೆ ಹಸ್ದ್ ಕಣ್ಣ್ ಕಾಣದಿದ್ರು "ನಂಗೆ ಹಸಿವು ಇಲ್ಲೆ. ಊಟ ಬ್ಯಾಡಂತ" ಹೇಳ್ತ್. "ನಿಂಗೆ ಮಡ್ಗಿದ ಅನ್ನ ತಂಗ್ಳ ಮಾಡಿ ಯಾರ್ ತಿಂಬದ್ ಕೈ ಕಾಲ್ ತೊಳ್ಕಂಡ್ ಬಾ ಇಕ್ಕಿನೆ, ಸೇರ್ದಸ್ಟ್ ಉಂಡ್ ಮಲ್ಗ್"ತೇಳ್ತ್. ಶ್ಯಾಂಗೆ ಊಟ ಸಿಕ್ಕಿದಕ್ಕಿಂತ ಚಿಕ್ಕವ್ವನ ಮೃದುವಾದ ಮಾತ್‌ಂದ ಬಾಳಾ ಸಂತೋಷ ಆತ್. ಆದರೆ, ಎಂದೂ ಇಲ್ಲದ ಚಿಕ್ಕವ್ವನ ಮಮತೆಗೆ ಕಾರಣ ಎಂತಂತ ಗೊತ್ತಾತ್‌ಲೆ. ಚಿಕ್ಕವ್ವನ ಪ್ರೀತಿ ಸಂಪಾದನೆ ಅವನ ಧ್ಯೇಯ ಆಗಿತ್ತ್. ಕುಶಿಂದ ಅಂವ ಎಂತ ಊಟ ಮಾಡ್ತೊ ಗೊತ್ತಾತ್‌ಲೆ. ಊಟ ಮಾಡಿ ಬಂದ್ ಮಲ್ಗಿತ್. ಆ ರಾತ್ರಿ ಅವಂಗೆ ಒಳ್ಳ ನಿದ್ದೆ!

ಮಾರನೆ ದಿನ ಎಲ್ಲವು ಎದ್ದರೂ ಅರುಣ ಎದ್ದತ್‌ಲೆ. ತಡ ಮಾಡಿ ಏಳ್ದು ಅವನ ಪದ್ಧತಿ. ಆದರೆ, ಪ್ರತಿದಿನ ಎಲ್ಲವು ಏಳಿಕೆ ಮುಂದೆ ಎದ್ದ್ ದಿನಚರಿನ ತೊಡಗುವ ಶ್ಯಾಮನ ಕೋಣೆ ನಿಶಬ್ಧವಾಗಿತ್ತ್. ಚಿಕ್ಕವ್ವ ಆ ಕಡೆ ಸುಳಿಯಕೇ ಹೋತ್‌ಲೆ.

ಅನಂತ ಇದ್ದಿದ್ದರೆ ಶ್ಯಾಂನ ಏಳ್‌ಸ್‌ತಿದ್ದೊ. ಆದರೆ, ಇಂದು ಅವು ಮನೆಲಿ ಇಲ್ಲದ್ರಂದ ಅವನ ವಿಚಾರಿಸುವವೇ ಇತ್ತ್‌ಲೆ. ಅರುಣ ಹಾಸಿಗೆಲಿ ಅತ್ತ ಇತ್ತ ಹೊರಳಾಡಿ ಒಮ್ಮೆಗೆ 'ಶ್ಯಾಮಣ್ಣ'ತ ಕಿರ್ಚಿತ್.

ಬೆಳಿಗ್ಗೆ ಎದ್ದಂಗೆ ಅಂವ ಕಲ್ಪವೃಕ್ಷನ ನೋಡ್ತಿತ್ತ್. ಆದರೆ, ಅವನ ಕಲ್ಪವೃಕ್ಷ ತೆಂಗಿನ ಮರ ಅಲ್ಲ 'ಶ್ಯಾಮಣ್ಣ'

ಅಷ್ಟೊತ್ತಿಗೆ ಅಲ್ಲಿಗೆ ಬಂದ ಅವನ ಅಮ್ಮ "ನಿನ್ನ ಶ್ಯಾಮಣ್ಣಂಗೆ ಏಳಿಕೆ ಇನ್ನೂ ಹೊತ್ತಾತ್‌ಲೆ. ಗಂಟೆ ಎಂಟಾತ್"ತೇಳ್ತ್.

"ನಾನು ಏಳ್ಸಿನೆ"ತೇಳಿ ಅರುಣ ಶ್ಯಾಂನ ರೂಮಿಗೆ ಹೋತ್. ಬಂದವನೆ ಅವನ ಹಾಸಿಗೆಗೆ ಹತ್ತಿ" ಶ್ಯಾಮಣ್ಣ, ಶ್ಯಾಮಣ್ಣ ಏಳ್, ಏಳ್" ತೇಳಿ ಅವನ ಕುಲ್ಕಿತ್.

ಶ್ಯಾಂ ಏಳುವ ಲಕ್ಷಣ ಕಂಡತ್‌ಲೆ. ಅವನ ಕೈ ಹಿಡ್ದ್ ಎಳ್ತ್. ಅಂವ ಅಲ್ಲಾಡ್ತ್‌ಲೆ.

"ಶ್ಯಾಮಣ್ಣ, ಶ್ಯಾಮಣ್ಣ"ತೇಳಿ ಅಂವಂಗೆ ಶಕ್ತಿ ಇದ್ದಷ್ಟ್ ಬೊಬ್ಬೆ ಹಾಕಿತ್. ಶ್ಯಾಮಣ್ಣನ ಕಿವಿ ಕಿವುಡಾಗಿತ್ತ್. ಅವನ ಮೈ ಮಂಜುಗಡ್ಡೆನಂಗೆ ತಣ್ಣಗೆ ಆಗಿತ್ತ್.

"ಅಮ್ಮಾ, ಅಮ್ಮಾ ಶ್ಯಾಮಣ್ಣಗೇನಾತ್ ನೋಡ್ ಬಾ"ತೇಳಿ ಮರ್ಡಿಕೆ ಶುರು ಮಾಡ್ತ್.

ಹೆದರಿ ಹೆದರಿ ಅಲ್ಲಿಗೆ ಬಂದ ರಾಧಿಕಾ ಶ್ಯಾಂನ ಶರೀರನ ಒಮ್ಮೆ ಮುಟ್ಟಿ ನೋಡಿ ಮುಸುಕು ತೆಗ್ದ್ ಬಾರದ ಉದ್ವೇಗಂದ ಮುಂದೇನೋತೇಳ್ವ ಹೆದ್ರಿಕೇಂದ "ಅಯ್ಯೋ ನಮ್ಮ ಶ್ಯಾಂ ಮಾತಾಡ್ತಾ ಇಲ್ಲೆ" ಎಲ್ಲಾ ಬನ್ನಿ ಬನ್ನಿತೇಳಿ ಬೊಬ್ಬೆ ಹಾಕಿತ್. ಅಷ್ಟೊತ್ತಿಗೆ ಅಲ್ಲಿಗೆ ಬಂದ ನೆರೆಹೊರೆಯವ್ರನ್ನ ನೋಡಿ ಅವಳ ದುಃಖ ಜಾಸ್ತಿ ಆತ್.

ಇವರೆಲ್ಲರ ಶೋಕಾಭಿನಯ ಮುಗಿಯಕನ ಅನಂತನವು ಬಂದ್ ತಲ್ಪಿದೋ. ಅವರ್ನ ಕಂಡ್ ಕೇಳ್ದ ಪ್ರಶ್ನೆಗೆ ಉತ್ತರ ಕೊಡದೆ ಬದ್ಲಿಗೆ.

"ನಿನ್ನೆ ರಾತ್ರಿವರೆಗೆ ಲಾಯ್ಕ ಇತ್ತಲ್ಲಪ್ಪ" ಬಾಕನ ರಾತ್ರಿ ಬೇರೆ ಆಗಿತ್ತ್. ಏನ್ ಮಾಡ್ಕಂಡ ಕಂದ, ನಿಂಗೆ ಎಂತಾತ್ ಮಗನೇ, ಅವ್ವ ಇಲ್ಲದ ಕೂಸು ನನ್ನ ಕೈಗೆ ಸಿಕ್ಕ್‌ಕನ ಅಂಬೆಕಾಲಿನ ಕೂಸಾಗಿತ್ತ್. ಇದುವರೆಗೆ ಅಂಗೈಲಿ ಇಟ್ಟ್‌ಕಂಡ್ ಸಾಕಿದೆ. ಇನ್ನ್ ನೋಡುವ ಪುಣ್ಯ ಇಲ್ಲದಾತಲ್ಲಪ್ಪ"ತೇಳಿ ಗೋಳಾಡಿಕೆ ಸುರು ಮಾಡ್ತ್.

ಇವೆಲ್ಲಾ ಗೋಳಿಟ್ಟ್‌ಕಂಡ್ ಇರ್ಕನೇ ನೆರೆಮನೆಯವು ಡಾಕ್ಟರಿಗೆ ಫೋನ್ ಮಾಡಿ ಕರ್ಸಿದ್ದೊ. ಡಾಕ್ಟ್ರ ರಾಧಿಕಾನ ಹಲವು ರೀತಿಲಿ ಪ್ರಶ್ನೆ ಮಾಡ್ದೋ ಅನಂತು ರಾಧಿಕಾನ ದುರುಗುಟ್ಟಿ ನೊಡ್ತ್. ಅವ್ನ ಮನ್ಸ್‌ಲಿ ರಾಧಿಕಾ ಆಗಲೇ ಅಪರಾಧಿ ಆಗಿತ್ತ್. ಅನಂತ್ "ಡಾಕ್ಟರೇ, ದಯವಿಟ್ಟು ನನ್ನ ಕೂಸುನ ಬದ್ಕಿಸಿ ಕೊಡಿ ಪ್ಲೀಸ್, ನಳಿನಿ ನೆನಪಿಗೆ ಇರ್ದು ಅವನೊಬ್ಬನೆ, ಇನ್ನ್ ಮುಂದೆ ಲಾಯ್ಕ ನೋಡಿಕಣೆ"ತೇಳಿ ಗೋಳಾಡ್ತ್.

ಡಾಕ್ಟರ್ 'ಇನ್ನೇನ್ ಪ್ರಯೋಜನ ಇಲ್ಲೆ'ತೇಳ್ವಂಗೆ ತಲೆಯಾಡ್ಸಿಬುಟ್ಟೊ. ತಮ್ಮ ಸ್ನೇಹಿತನೂ ಆಗಿರ್ವ ಅನಂತುನ ಹೊರಗೆ ಕರ್ದ್. "ಅನಂತು, ನಾನ್ ಹೇಳುವಂತದ್ನ ಹೇಳೊಕಲ್ಲ, ಹೈದಂಗೆ ವಿಷ ಪ್ರಯೋಗವಾಗುಟ್ಟು, ಮುಂದೆನ ಕೆಲ್ಸ ಬ್ಯಾಗ ಮುಗ್ಸಿ ಬುಡಿ. ಇಲ್ಲದಿದ್ರೆ ತೊಂದರೆ ಅದು. ಅಥವಾ ನಿಂಗೆ ಯಾರಾರ ಮ್ಯಾಲೆ ಸಂಶಯ ಇದ್ದರೆ ಪೊಲೀಸ್ ಕೇಸ್ ಕೊಡು" ತೇಳಿ ಹೊರ್ಟ್ ಹೋದೊ. ಅನಂತಗೆ

ಗೋಳಾಡ್ದು ಬುಟ್ರ್‌ರೆ ಬೇರೆ ದಾರಿ ಇತ್ತ್‌ಲೆ. ದೇವ್ರೇ ನೀನೇ ಗತಿತ ಯಾರಿಗೂ ಅನುಮಾನ ಬಾರದಂಗೆ ಮುಂದೆನ ಕಾರ್ಯ ಮಾಡ್ತ್.

ಅರುಣಂಗೆ ಬಾಳಾ ಜ್ವರ ಅನಂತನ ಮನೆ ಶೂನ್ಯ, ಮನೆಲಿ ಭಯಂಕರ ಪರಿಸ್ಥಿತಿ. ಈಗ ಎಂದಿನಂಗೆ ಸಾಯಂಕಾಲ ಸ್ಕೂಲಿಂದ ಮನೆಗೆ ಬರ್ವ ಶ್ಯಾಂ ಇಲ್ಲೆ. ಅರುಣನ ಸಂತೋಷದ ಬೊಬ್ಬೆ ಇಲ್ಲೆ. ರಾಧಿಕಾನ ಅಬ್ಬರದ ಮಾತಿಲ್ಲೆ. ಮನೆಲಿ ಎಲ್ಲೆಲ್ಲೂ ಶಾಂತಿ, ನೀರವ ಮೌನ.

ಅನಂತುಂದ ಆಗೊಮ್ಮೆ ಈಗೊಮ್ಮೆ ಬರ್ವ ನಿಟ್ಟುಸುರ್, ರಾಧಿಕಾನ ಕಾರಣವಿಲ್ಲದ ಸಿಟ್ಟ್. ಸಿಟ್ಟ್‌ತೇಳ್ರೆ ಈಗ ಅನಂತುನ ಮ್ಯಾಲೆ ಬ್ಯಾರೆ ಬ್ಯಾರೆ ಡಾಕ್ಟರ್‌ನ ಕರ್ಸಕಾಗಿತ್ತ್. ಆ ಮದ್ದ್ ಸರಿಯಾತ್‌ಲೆ ಹಂಗೆ ಹಿಂಗೆತೇಳಿ. ನಡುಲಿ ಪಶ್ಚಾತಾಪ.

ಕೆಲವು ಸಲ ಶ್ಯಾಂನ ಭೀಕರಾಕಾರ ಕಣ್ಣ್ ಮುಂದೆ ನಿತ್ತಂಗೆ ಆಗ್ತಿತ್ತ್. ಅವನ ದೀನ ಸ್ವರ ಕೇಳ್ದಂಗೆ ಆಗ್‌ತಿತ್ತ್. "ಹೊಡಿಬ್ಯಾಡ ಚಿಕ್ಕವ್ವ, ಇನ್ ಯಾಗೊಳು ಹಂಗೆ ಮಾಡ್ದುಲೆ, ತೇಳ್ದ ಮಾತ್ ಬಾಣದ ಮೊನೆನಂಗೆ ಎದೆಗೆ ಕುತ್ತ್‌ತಿತ್ತ್.

ಚೆ, ಒಂದ್ ನಿಮ್ಸ ತನ್ನ ಕ್ರೂರ ಮನ್ಸ್‌ನ ಬಿಗಿ ಹಿಡ್ದಿದ್ದರೆ ಇಂದ್ ಶ್ಯಾಂ ಕಣ್ಣ್ ಮುಂದೆ ಇರ್ತಿತ್ತ್. ಅರುಣ ಸಂತೋಷಂದ ಇರ್ತಿತ್ತ್. ಇಂತಹ ಅವಸ್ಥೆಗೆ ತಾನೇ ಕಾರಣ ತಾನೆ?

ಮಾರನೆ ದಿನ ಅರುಣನ ಆಸ್ಪತ್ರೆಗೆ ಸೇರ್ಸಿದೋ, ಡಾಕ್ಟರ್ ಮದ್ದ್ ಕೆಲ್ಸ ಮಾಡ್ತಿತ್ತ್‌ಲೆ. ಅರುಣನ ಬಾಯಿಂದ 'ಶ್ಯಾಮಣ್ಣ, ಶ್ಯಾಮಣ್ಣ'ತೇಳ್ವ ಸ್ವರ ಬುಟ್ರೆ ಅಂವ ಏನ್ ಮಾತಾಡ್ತಿತ್‌ಲೆ. ಒಂದ್ ವಾರಂದ ಊಟ ಮಾಡ್ತಿತ್‌ಲೆ. ದಿನಂದ ದಿನಕ್ಕೆ ಜ್ವರ ಏರ್‌ತಿತ್ತ್.

ಡಾಕ್ಟರ್, "ಯಾರ್ ಶ್ಯಾಮಣ್ಣ ತೇಳ್ರೆ ಅವರ್ನ ಕರ್ಸಿ. ಇವಂಗೆ ಯಾವ ಮದ್ದ್ ಹಿಡಿಸ್ತಾ ಇಲ್ಲೆ, ಮನೋರೋಗಕ್ಕೆ ಮದ್ದ್ ಇಲ್ಲೆತ ಹೇಳಿಬುಟ್ರೊ.

ಅರುಣ ಹುಚ್ಚುಚ್ಚಾಗಿ ಮಾತಾಡಿಕೆ ಸುರು ಮಾಡಿತ್ತ್.

"ಅಪ್ಪಾ, ನೋಡು ಶ್ಯಾಮಣ್ಣ ನಿಂಗೆ ಕಾಣ್ತಾ ಉಟ್ಟ"

"ಇಲ್ಲೆಪ್ಪ ಶ್ಯಾಮಣ್ಣ ಸ್ಕೂಲಿಗೆ ಹೋಗುಟ್ಟು ಈಗ ಬಂದದೆ"

"ಸುಳ್ಳು ಅಪ್ಪ, ನೋಡು ನನ್ನ ಕಣ್ಣ್ ಮುಂದೆ ನಿತ್ತುಟ್ಟು, ಒಟ್ಟಿಗೆ ಅವನ ಅಮ್ಮ ಸಹ ಉಟ್ಟು, ಅಣ್ಣ ಮಾತಾಡ್ತಾ ಇಲ್ಲೆ ಅಂವ ಚಿಕ್ಕವ್ವಂಗೆ ಹೆದ್ರಿಟ್ಟು'ತೇಳಿ ಬಡಬಡಿಸಿತ್.

ರಾಧಿಕಾನ ನಿಟ್ಟುಸಿರ್ ಈಗ ರೋಧನವಾತ್.

"ಅಮ್ಮಾ ಅಣ್ಣಂಗೆ ಇನ್ನ್ ಮುಂದೆ ಹೊಡ್ದಿಯಾ"

"ಇಲ್ಲೆಪ್ಪಾ ಅಂವ ನಿನ್ನ ಅಣ್ಣಾ ಅಲ್ಲಾ"

"ಹಂಗಾರೆ ನಾನ್ ಅವನ ಕರ್ಕಂಡ್ ಬನ್ನೆ. ಇಲ್ಲೆ ದೂರಲಿ ನಿತ್ತುಟ್ಟು, ನನ್ನ ನೋಡಿ ನಗಾಡ್ತಾ ಉಟ್ಟು.

ಅರುಣ ಬಾತ ಕರೀತಾ ಉಟ್ಟು"ತ್ತೇಳಿ ಕೈಚಾಚಿತ್.

ಅನಂತ ಮತ್ತೆ ರಾಧಿಕಾನ ಎದೆ ಒಡ್ದು ಹೋತ್.

"ಅಪ್ಪಾ, ನೀವೆಲ್ಲಾ ಇಲ್ಲೇ ಇರಿ, ನಾನ್ ಅಣ್ಣನ ಕರ್ಕಂಡ್ ಬನ್ನೆ"

"ರಾಧಿಕಾ, ಬ್ಯಾಡಪ್ಪಾ ನನ್ನ ಬುಟ್ಟ್ ಹೋಬಡ"ತ ಚೀರಿತ್.

"ಅಣ್ಣಾ ನಗಾಡಿಕಂಡಿದ್ರೂ ಅವನ ಮುಖಲಿ ಸಿಟ್ಟ್ ಉಟ್ಟು, ನಾನ್ ಹೋಗದಿದ್ದರೆ ಸಿಟ್ಟ್ ಮಾಡಿಕಂಡದೆ"ತೇಳಿ ಆಯಾಸದಿಂದ ಕಣ್ಣ್ ಮುಚ್ಚಿತ್.

"ಅಯ್ಯೊ, ನಿಂಗೆ ಎಂತ ಆಗ್ತಾ ಉಟ್ಟು ಕಂದ"ತೇಳಿ ರಾಧಿಕಾ ಎದೆ ಬಡ್ಕಂಣ್ತ್"

ಅರುಣನ ಮುಕವಿಕೃತ ಆತ್. ಅಂವ ಅರ್ಥ ಆಗದಂಗೆ ಏನೋ ಹೇಳ್ತಿತ್ತ್. ಅನಂತ ಅವನ ತಲೆ ತನ್ನ ತೊಡೆ ಮ್ಯಾಲೆ ಇಸಿಕಣ್ತ್.

'ಶ್ಯಾ....ಮ...ಣ್ಣಾ'ತೇಳಿ ಅವನ ಮುಕ ಒಂದ್ ಕಡೆ ಜೋತ್ ಹೋತ್. ಅವನ ಶ್ವಾಸ ನಿತ್ತ್ ಹೋತ್. ಅನಂತ–ರಾಧಿಕಾ ಇನ್ನಿಲ್ಲದಂಗೆ ಗೋಳಾಡ್ದೋ. ಶ್ಯಾಮಣ್ಣನ ಕರ್ಕಂಡ್ ಬಾಕೆ ಹೋದ ಅರುಣ ಮತ್ತೆಂದೂ ಬಾತ್‌ಲೆ.

* * * * *

# ಸಂಶಯದ ಸುಳಿಲಿ

**ಅಂದ್** ರಾತ್ರಿ ಊಟ ಮಾಡ್ತಿದ್ದ ಇನ್ಸ್‌ಪೆಕ್ಟರ್ ಆನಂದ್‌ಗೆ ಪೊಲೀಸ್ ಸ್ಟೇಷನ್‌ಂದ ಅರ್ಜೆಂಟಾಗಿ ಯಾವುದೋ ಕೇಸ್ ವಿಚಾರಲಿ ಬರಕುತ ಫೋನ್ ಬಾತ್. ಆನಂದ್ ಆತುರಾತುರಾಗಿ ಊಟ ಮಾಡಿ ಹೊರ್ಟು ಹೋಗಿತ್ತ್.

ದಿವ್ಯ, ಆನಂದ್ ಬೇಗ ಬಾದುತ ಸುಮ್ಮನೆ ಬಾಗ್ಲ್ ಮುಂದೆ ಮಾಡಿ ಬಂದ್ ಊಟ ಮುಗ್ಸಿ ಪಾತ್ರೆ ತೊಳ್ದ್ ಬಂದ್ ಮಲ್ಗಿದ್ದ ಕೂಸು ಆದಿತ್ಯನ ಹತ್ರ ಕುದ್ದ್ ಅರ್ಧ ಓದಿ ಮಡ್ಗಿದ್ದ ಪುಸ್ತಕ ತಕಂಡ್ ಓದಿಕೆ ಶುರು ಮಾಡ್ತ್.

ಸ್ವಲ್ಪ ಹೊತ್ತಿಗೆ ಮನೆ ಎದುರ್ ಹೆಜ್ಜೆ ಸದ್ದ್ ಕೇಳ್ಸಿತ್. ಆನಂದ್ ಬಂದಿರ್ದುತ ಕೆಮಿನಿಮಿರ್ಸಿ ಕುದ್ದತ್. ಎದ್ದ್ ನೋಡನತ ಅಂದ್‌ಕಂಡರೂ ಪುಸ್ತಕನ ಬುಟ್ಟ್ ಏಳಿಕೆ ಮನ್ಸಾತ್‌ಲೆ. ಪುಸ್ತಕ ಅಷ್ಟ್ ಇಂಟ್ರೆಸ್ಟಾಗಿತ್ತ್.

ಮರುಕ್ಷಣಲಿ ಬಾಗ್ಲ್ ದೂಡಿಕಂಡ್ ಒಬ್ಬ ಮನ್ಸ ಒಳಗೆ ಬಂದಿತ್ತ್. ಏದುಸುರ್ ಬುಡ್ತಿದ್ದ ಆ ಮನ್ಸ ಬಾಳ ದೂರಂದ ಓಡಿ ಬಂದಂಗೆ ಕಾಂಬತಿತ್ತ್. ದಿವ್ಯ ಬೆಚ್ಚಿ ಬೀತ್. ಜೋರಾಗಿ ಕಿರ್ಚಿಕೆ ಬಾಯಿ ತೆರ್ತ್. ಆದರೆ ಅವ್ಳ ಸ್ವರ ಗಂಟಲ್‌ಲೇ ಉಳ್ದ್ ಹೋತ್. ಅವ್ಳಿಗೇ ಅದ್ ಕೇಳ್ಸಿತ್‌ಲೆ.

ಗಟ್ಟಿಮುಟ್ಟಾದ ಒಬ್ಬ ಮನ್ಸ ಕರಿಯ ಮುಸುಕು ಹಾಕಿ ನಿತ್ತಿತ್. ಒಳಗೆ ಬಂದ ಮನ್ಸ ತಾನೇ ಬಾಗ್ಲ್ ಹಾಕಿ ಸಮಾಧಾನಲಿ ಉಸಿರಾಡ್ತ್.

ಅಷ್ಟೊತ್ತಿಗೆ ಧೈರ್ಯ ತಂದ್‌ಕಂಡ್ ದಿವ್ಯ ಗಾಬರಿಲಿ ಕೇಳ್ತ್. "ಯಾರ್ ನೀನ್ ಇಲ್ಲಿಗ್ಯಾಕೆ ಬಂದ"

ಆ ಸ್ವರ ಕೇಳಿ ಬೆಚ್ಚಿ ಬಿದ್ದ ಆ ಮನ್ಸ ದಿವ್ಯನ ಮುಖನೇ ದಿಟ್ಟಿಸಿ ನೋಡ್ತ್. ಕೂಡಲೇ ತನ್ನ ಮುಸುಕುನ ತೆಗ್ದ್ ಹಾಕಿತ್. ದಿವ್ಯ ಒಂದ್ ಕ್ಷಣ ದಿಟ್ಟಿಸಿ ನೋಡಿ ಅವನ ಗುರ್ತ್ ಹಿಡ್ತ್.

"ಅಯ್ಯೋ... ನೀನಾ" ಮುಂದಕ್ಕೆ ಅವ್ಳಂದ ಮಾತೇ ಹೊರ್ಟತ್‌ಲೆ. ಓಡ್ಸಿಕಂಡ್ ಬಂದಿದ್ದ ಪೊಲೀಸ್ರಂದ ತಪ್ಪಿಸಿ ಕಣಿಕೆ ಬಾಗ್ಲ್ ತೆರ್ದಿದ್ದ ಮನೆಗೆ ನುಗ್ಗಿತ್ ಆ ಮನ್ಸ.

ಅಂವ ಹೊರ್ಡುವ ಆತುರ ತೋರ್ಸಿತ್. ದಿವ್ಯ ಅವನ ತಡ್ತ್. ಆದರೆ ಇದ್ ಇನ್ಸ್‌ಪೆಕ್ಟರ್ ಆನಂದ್‌ನ ಮನೆತ ತಿಳ್ದ್ ಆ ಮನ್ಸ ಬೆಚ್ಚಿ ಬೀತ್.

ದಿವ್ಯ ಅವಂಗೆ ಊಟಕ್ಕೆ ಹಾಕಿತ್. ಅಂವ ಅನ್ನ ಕಲ್ಸಿ ಬಾಯಿಗೆ ಹಾಕುವ ಹೊತ್ತಿಗೆ ಸರಿಯಾಗಿ ಬಾಗ್ಲ್ ಬಡ್ದ ಸದ್ದಾತ್. ದಿವ್ಯ ಅವನ ಹಿಂದೆನ ಬಾಗ್ಲಂದ ಕಳ್ಸಿ ಬಂದ್ ಬಾಗ್ಲ್ ತೆರ್ತ್. ಬಾಗ್ಲ್ ತೆಗಿಯಕೆ ತಡ ಆದಕ್ಕೆ ಹಂಗೆ ಒಳಗಿಂದ ಗಂಡಸ್‌ನ ಸ್ವರ ಕೇಳ್ಸಿಕಂಡಿದ್ದ ಆನಂದ್ ಯಾರ್ ಬಂದಿದ್ದೊತ ವಿಚಾರ್ಸಿತ್. ದಿವ್ಯನ ತೊದಲ್ ಉತ್ತರ ಅವಂಗೆ ಸಂಶಯ ಹುಟ್ಟಿಸಿತ್. ಸಿಟ್ಟ್‌ಲಿ ಮಾತಾಡದೆ ಹೋಗಿ ಮಲ್ಗಿತ್. ತಲೆಲಿ ನೂರೆಂಟ್ ಯೋಚನೆಗ ಸುಳಿದಾಡ್ತಿದ್ದೊ.

ಮತ್ತೊಂದ್ ದಿನ ಹಗ್ಲ್ ಆ ವ್ಯಕ್ತಿ ಬಂದಿತ್. ಅಂವ ಬಂದ್ ವಾಪಾಸ್ ಹೊರ್ಡ್‌ಕನ ಆನಂದನೂ ಬಂದಿತ್. ಆ ವ್ಯಕ್ತಿ ಗೇಟು ದಾಟುದ್ಕೂ ಆನಂದ್ ಬರೊದಕ್ಕೂ ಸರಿ ಆಗಿತ್. ಆದರೆ ದಿವ್ಸ ಇದನ್ನ ಗಮನಿಸಿತ್‌ಲೆ.

ಆನಂದ ಆ ವ್ಯಕ್ತಿನ ದಿಟ್ಟಿಸಿ ನೋಡ್ತ್. ಪರಿಚಯ ಮುಖತ ಅನ್ಸಿತ್‌ಲೆ. ಅಲ್ಲದೆ ಆ ಅಪರಿಚಿತ ವ್ಯಕ್ತಿನ ಸಂಬಂಧ ಎಂತತ ದಿವ್ಯನೂ ಹೇಳಿತ್‌ಲೆ. ಇದ್ರಂದಾಗಿ ಆನಂದನ ತಲೆಗೆ ಮುಂದೆನೇ ಹೊಕ್ಕಿದ್ದ ಸಂಶಯದ ಹುಳು ಜಾಸ್ತಿ ಕೊರಿಯಕೆ ಶುರು ಮಾಡಿತ್. ಸ್ವಲ್ಪ ಹೊತ್ತ್ ಮನೆ ಹೊರಗೆನೇ ಸುತ್ತಾಡಿ ಒಳಗೆ ಬಾತ್. ಸಿಡ್ಕಿಕಂಡೇ ಒಳಗೆ ಬಂದ ಆನಂದ ಊಟ ಮಾಡಿಕಂಡೇ

"ಇಂದ್ ಮನೆಗೆ ಯಾರ್ ಬಂದಿದ್ದೊ"ತ ಕೇಳ್ತ್.

"ಯಾರೂ ಬಾತ್‌ಲೆಲಾ"ತೇಳ್ಕನ ಆನಂದನ ಸಿಟ್ಟ್ ನೆತ್ತಿಗೇರ್ತ್. ಅಂವ ಬಾಯಿಗೆ

ಬಂದಂಗೆ ಕಿರ್ಚಾಡ್ತ್.

ದಿವ್ಯ ತುಟಿ ಎರ್ಡ್ ಮಾಡ್ತ್‌ಲೆ. ಆ ವ್ಯಕ್ತಿನ ಬಂದಿತ್ತ್‌ತ ಹೆಂಗೆ ಹೇಳ್ದುತ ಗ್ಯಾನ ಮಾಡ್ತಿತ್ತ್. ಆನಂದ್ ಎಷ್ಟಾದರೂ ಪೋಲೀಸ್ ಇಲಾಖೆಯವ! ಆ ವ್ಯಕ್ತಿ ಪೋಲೀಸರಿಗೆ ಬೇಕಾದ ಕೊಲೆಗಾರ! ಅವ್ಳು ಉಭಯ ಸಂಕಟಲಿ ತೊಳಲಾಡ್ತ್. ಅಲ್ಲದೆ ಆನಂದ ಬೇರೆ ದಯಾದಾಕ್ಷಿಣ್ಯ ಇಲ್ಲದ ನಿಷ್ಠಾವಂತ ಅಧಿಕಾರಿಯಾಗಿತ್ತ್.

ಮನೆ ಅಶಾಂತಿನ ಗೂಡಾಗಿತ್ತ್. ದಿನಾ ಸಿಡಿಮಿಡಿ. ಸಂಶಯತೇಳ್ದು ಬಹಳ ಅನರ್ಥಕಾರಿ. ಸಂಶಯತೇಳ್ದು ದುರಂತದ ಮುನ್ಸೂಚನೆ, ಅವನತಿಗೆ ಮೊದಲ ಮೆಟ್ಲ್.

ಆನಂದಂಗೆ ದಿವ್ಯನ ಸಿಟ್ಟ್‌ಲಿ ನುಂಗಿ ಬಿಡ್‌ವಂಗೆ ಆಗಿತ್ತ್. ತಮ್ಮ ಸುಖ ಸಂಸಾರಲಿ ಮಧ್ಯೆ ಬಂದ ಆ ವ್ಯಕ್ತಿ ಸಿಕ್ಕಿರೆ ಚೂರ್ ಚೂರ್ ಮಾಡಿಬಿಡಕು.

ಪೋಲೀಸ್ ಅಧಿಕಾರಿಯಾದ ತನ್ನ ಕರ್ತವ್ಯ ಪ್ರಜ್ಞೆ ಎಚ್ಚರ್‌ಸ್ತಿತ್ತ್. ಆನಂದ ದಿವ್ಯರ ಮಧ್ಯೆ ಮಾತಿಲ್ಲೆ–ಕತೆಯಿಲ್ಲೆ. ಪುಟ್ಟ ಆದಿತ್ಯನ ಮುಖಾಂತರ ಏನಿದ್ದರೂ ಅವನಿಲ್ಲದಿದ್ದರೆ ಬಹುಶಃ ದೇವರೇ ಗತಿ!

ಹೆಜ್ಜೆ ಮೇಲೆ ಹೆಜ್ಜೆ ಹಾಕಿ ಬಾತ್ ಆನಂದ. ಸಾಯಂಕಾಲದ ಹೊತ್ತ್ ಕತ್ತಲೆ ಆಗ್ತಾಯಿತ್ತ್. ಒಳಗಿಂದ ಮಾತ್ ಕೇಳ್ತಿತ್ತ್. ಬಾಗ್ಲ್‌ನ ಜಾಡ್ಸಿ ಒದ್ದತ್. ಬಾಗ್ಲ್ ತೆರ್ದ್‌ಕಣ್ತ್. ಮತ್ತೆ ಅದೇ ವ್ಯಕ್ತಿ ದಿವ್ಯನ ಕೈ ಹಿಡ್ದ್ ಏನೋ ಹೇಳ್ತಿತ್ತ್. ಮರುಕ್ಷಣಲಿ ಆ ವ್ಯಕ್ತಿ ಒಂದೇ ಹಾರಿಗೆ ಮಾಯ ಆಗಿತ್ತ್. ಆನಂದ ಶಕ್ತಿ ಇದ್ದಷ್ಟ್ ಬೀಸಿತ್ ದಿವ್ಯನ ದವಡೆಗೆ. ದಿವ್ಯ ಬ್ಯಾನೆ ಅಪಮಾನ ಸಹಿಸಿಕೆ ಆಗದೆ ಕುಸ್ದ್ ಹೋತ್. ಆನಂತ ಆಗಲೇ ತನ್ನ ಬಟ್ಟೆಗಳ್ನ ಜೋಡ್ಸಿಕಂಡ್ ಮನೆಂದ ಹೊರ್ಟು ಹೋತ್.

ಮುಂದೆ ಒಂದ್ ವಾರ ಕಳಿಯಕನ ಆನಂದಂಗೆ ಬ್ಯಾರೆ ಊರಿಗೆ ವರ್ಗ ಆದ ವಿಷ್ಯ ಎಲ್ಲರ ಬಾಯಿಲೂ ತುಂಬಿತ್ತ್. ನೀವು ಅವರೊಟ್ಟಿಗೆ ಹೋದುಲೆನಾ?ತ ಎಲ್ಲವೂ ದಿವ್ಯನ ಕೇಳ್ಕನ ಅವ್ಳು ತನ್ನ ಚಾಕರಿನ ನೆಪ ಹೇಳಿ ಜಾರಿಕಂಬತ್ತಿತ್ತ್.

ದಿವ್ಯನ ಬಾಳ್ ಬರಿದಾಗಿತ್ತ್. ಪುಟ್ಟ ಆದಿತ್ಯ ಅವ್ಳ ಬಾಳಿಗೆ ದೀಪ. ಆನಂದನ ಸಮಾಚಾರನೇ ಇತ್ತ್‌ಲೆ. ಒಂದೆರಡ್ ತಿಂಗ ಕಳ್ದ್‌ಹೋಗಿದ್ದೊ. ಬೆಂಗಳೂರಿಗೆ ವರ್ಗ ಮಾಡ್ಸಿಕಂಡಿದ್ದ ಆನಂದ ತನ್ನ ಕೆಲ್ಸಕ್ಕೆ ರಾಜೀನಾಮೆ ಕೊಟ್ಟುಟ್ಟುತೇಳ್ವ ಸುದ್ದಿ ಕೇಳಿ ದಿವ್ಯಂಗೆ ಹೆದ್ರಿಕೆ ಆತ್. ಅವ್ಳ ದುಃಖ ಹೆಪ್ಪು ಗಟ್ಟಿ ಹೋಗಿತ್ತ್. ಅವ್ಳ ಚಾಕರಿ ಒಂದೇ ಅವ್ಳ ಬದ್ಕಿಗೆ ಆಸರೆ ಆಗಿತ್ತ್. ಅವ್ಳ ಸ್ವಾಭಿಮಾನ ಘನತೆಗ

ಬ್ಯಾರೆಯವ್ರ ಎದ್ರುಗೆ ತಲೆ ತಗ್ಸ್‌ವಂತ ಸಂದರ್ಭನ ಸಹಿಸ್‌ತಿತ್ಲೆ. ದಿನ ಕಳ್ದಂಗೆ ಆನಂದ ಇಲ್ಲದೆ ಬದ್ಕುದುನ ಅಭ್ಯಾಸ ಮಾಡಿಕಣ್ತ್.

* * * * *

ಸುಮಾರ್ ಆರ್ ವರ್ಷ ಕಳ್ದ್ ಹೋಗಿತ್ತ್. ಪುಟ್ಟ ಆದಿತ್ಯ ಮೂರನೇ ಕ್ಲಾಸಿಗೆ ಬಂದಿತ್ತ್. ಅಂವ ದಿನಾ ಅವ್ನ ಗೆಳೆಯರ್ ಅಪ್ಪಂದರ ವಿಷ್ಯ ಮಾತಾಡ್ದುನ ದಿವ್ಯನ ಹತ್ರ ಬಂದ್ ಹೇಳ್ತಿತ್ತ್. ನನ್ನ ಅಪ್ಪ ಎಲ್ಲಿತ ಕೇಳ್ತಿತ್ತ್. ಅಪ್ಪಂಗೆ ರಜ ಇಲ್ಲೆಂತೆ, ನಾ...ಳೆ ಬಂದವೆತ ಹೇಳಿ ಹೇಳಿ ಅವ್ಳಿಗೆ ಸಾಕಾಗಿತ್ತ್. ಪಾಪ ಕೂಸುಗೆ ಸುಳ್ಳು ಹೇಳುವಂತ ಕರ್ಮ ನನ್ನದ್‌ತೇಳಿ ಅವ್ಳು ನಿಟ್ಟುಸುರು ಬಿಡ್ತಿತ್ತ್. ಅವ್ಳ ಮನಸ್‌ನ ವೇದನೆ ಹೊರಗೆ ಹಾಕ್ತಿತ್ತ್.

* * * * *

ಅಂದ್ ಅಪರೂಪಕ್ಕೆ ಪೋಸ್ಟ್‌ಮ್ಯಾನ್ ಎರ್ಡ್ ಕಾಗದ ಕೊಟ್ಟ್ ಹೋತ್. ಅವ್ಳು ಆಶ್ಚರ್ಯಲಿ ನೋಡ್ತ್. ಹೌದು ಅವ್ಳ ಹೆಸ್ರಿಗೇ ಬಂದಿತ್ತ್. ತನಿಗೆ ಕಾಗದ ಬರೆಯವು ಯಾರ್ ಇಲ್ಲೆತ ಅಲ್ಲ. ಈಗೆಲ್ಲಾ ಎಲ್ಲಾ ವಿಷ್ಯಗ ಮೊಬೈಲ್‌ಲೇ ನಡ್ದ್ ಹೋಗ್ತಿತ್ತ್. ಬೆಳಿಗ್ಗೆ ಗುಡ್‌ಮಾರ್ನಿಂಗ್ ಮೆಸೇಜ್‌ಂದ ಹಿಡ್ದ್, ಬರ್ತ್‌ಡೇ ಮತ್ತೆ ಒಳ್ಳೆ-ಕೆಟ್ಟ ಎಲ್ಲಾ ಸಮಾಚಾರಗ ಮೊಬೈಲ್‌ಲೇ ಬಾತಿತ್ತ್.

ಮೆಲ್ಲೆ ಒಂದ್ ಕಾಗದನ ತೆರ್ದ್ ನೋಡ್ತ್. ಆ ಅಕ್ಷರಗ ಯಾರ್ದುತ ಗೊತ್ತಾತ್‌ಲೆ ಹೊಸ ಕೈ ಬರಹ. ಕಾಗದದ ಕೆಳಗೆ ಬರ್ದ್‌ದ್ ನೋಡ್ತ್. -"ಕೃಷ್ಣ, ಬಳ್ಳಾರಿ ಸೆಂಟ್ರಲ್ ಜೈಲ್" ಎದೆ ಧಸಕ್‌ತೇಳ್ತ್.

ಕಾಯಿಲೆಂದ ನರಳ್ತಿದ್ದ ಕೃಷ್ಣ ಕಡೇ ಸಲ ನೋಡಕುತೇಳಿ ಕಾಗದ ಬರ್ದಿತ್ತ್. ತಾನ್ ಜಾಸ್ತಿ ದಿನ ಬದುಕುದುಲೆ ಒಮ್ಮೆ ಬಂದ್ ನನ್ನ ನೋಡುತ ಬರ್ದಿತ್ತ್.

ಎರಡನೇ ಕಾಗದನ ಓದುತ್ತಿದ್ದಂಗೆ ಹಾಸಿಗೆ ಮ್ಯಾಲೆ ದೊಪ್ಪ್‌ತ ಬೀತ್ ಅವ್ಳ ಕಣ್ಣ್‌ಂದ ನೀರ್ ಇಳಿಯತಿತ್ತ್.

"ಯಾಕಮ್ಮಾ ಮರ್ಡ್‌ತಾವಳಾ"ತೇಳ್ಕನೇ ಅವ್ಳಿಗೆ ಎಚ್ಚರ ಆದ್. ಕೈಲಿದ್ದ ವಾಚ್ ಐದ್ ಗಂಟೆ ತೋರ್ಸ್‌ತಿತ್ತ್. ಬಾಳ ಹೊತ್ತ್‌ಂದ ಇಲ್ಲೆ ಕುದ್ದಿದ್ದೆತ ಅನ್ಸಿ ರೋಷಂದ ಆ ಕಾಗದನ ತೆಗ್ದ್ ದೂರ ಬಿಸಾಕಿತ್. ತನ್ನನ್ನೇ ನೋಡ್ತಿದ್ದ ಪುಟ್ಟ ಆದಿತ್ಯನ ತಲೆ ಸವ್ರಿ,

"ಮರ್ಡ್ತಾ ಇಲ್ಲೆಪ್ಪಾ, ಕಣ್ಣ್‌ಗೆ ಕಸ ಬೀತ್. ಅದ್ಕೆ ಕಣ್ಣ್‌ಲಿ ನೀರ್ ಬಾತ್. ಅವ್ನ ಹೆಗಲ್ ಮ್ಯಾಲೆ ಇದ್ದ ಪುಸ್ತಕದ ಹೊರೆನ ಎತ್ತಿ ಮಡ್ಗಿ ಕೈಕಾಲ್ ತೊಳ್ಸಿ ತಿಂಡಿ-ಹಾಲು ಕೊಟ್ಟತ್.

"ಅಮ್ಮಾ, ನೀನ್ ಆಫೀಸಿಗೆ ಹೊತ್ಲೆನಾ"

"ಹೋಗಿದ್ದೆಪ್ಪಾ, ಯಾಕೊ ತಲೆ ಬ್ಯಾನೆತ ಮಧ್ಯಾಹ್ನ ಬಂದ್ ಬುಟ್ಟೆ"

ಆದಿತ್ಯ ತಿಂಡಿ ತಿಂದ್‌ಕಂಡ್ ತನ್ನ ಸ್ಕೂಲ್, ಮೇಡಂ, ತನ್ನ ಫ್ರೆಂಡ್ಸ್‌ಗಳ ವಿಷ್ಯ ಏನೇನೋ ಹೇಳ್ತಿತ್ತ್. ಆದರೆ ದಿವ್ಯ ಸುಮ್ಮನೆ ಹೂಂಗುಟ್ಟ್‌ತಿತ್ತ್. ಅವ್ಳ ಮನ್ಸ್ ಎತ್ತಳೋ ಇತ್ತ್.

"ಹೋಗಮ್ಮಾ ನಾನ್ ಹೇಳ್ತಾ ಇದ್ದರೆ ನೀನ್ ಎಂತದ್ದೋ ಗ್ಯಾನ ಮಾಡ್ತವಳಾ ನಾನ್ ಹೇಳ್ದುಲೆ"ತ ಮುಖ ಬಾಡಿಸಿತ್.

"ಇಲ್ಲಪ್ಪಾ ಹೇಳ್ ಕೇಳ್ತಾವಳೆ"

"ಊಹುಂ, ಬ್ಯಾಡ, ನಿಂಗೆ ಇಂದ್ ತಲೆ ಬ್ಯಾನೆ ಅಲಾ. ನೀನ್ ಮಲ್ಕ. ನಾನ್ ಹೋಂವರ್ಕ್ ಮಾಡ್ನೆ"

"ಸರಿ ಹಂಗೇ ಮಾಡಪ್ಪಾ" ತಲೆ ಸವರಿ ಕಳ್ಸಿತ್.

ಅವನ ಕಣ್ಣ್ ತುಂಬಾ ನೋಡ್ತ್. ಎಂತಹ ಕಟುಕ ಮನ್ಸ್ ಆಗಿರ್ದು. ಇಂತ ಕಂದನ ಬುಟ್ಟ್ ಹೋಗೊಳಲ್ಲಾ. ಈಗ ಡೈವೋರ್ಸ್ ನೋಟೀಸ್ ಕಳ್ಸಿವಳಲ್ಲಾ. ಬೆಳ್ಳಗಿರ್ದೆಲ್ಲಾ ಹಾಲ್‌ತ ನಂಬಿದಕ್ಕೆ ತಕ್ಕ ಪ್ರಾಯಶ್ಚಿತ ಆತ್. ಈ ಕಂದಂಗೆ ಎಂತತ ಹೇಳಲಿ? ಎಷ್ಟ್ ದಿನಾತ ನಾಳೆ ಬಂದವೆ, ನಾಳೆ ಬಂದವೆ, ರಜ ಇಲ್ಲೆತ ಸುಳ್ಳ್ ಹೇಳ್ದು.

ನೆನ್ಸ್‌ತಿದ್ದಂಗೆ ಅವ್ಳ ಮನ್ಸ್ ಕಠಿಣವಾಗ್ತ್‌ತಿತ್ತ್. ಹೆಂಗೂ ತನ್ನ ಕಾಲ್ ಮ್ಯಾಲೇ ತಾನ್ ನಿತ್ತೊಳೆ. ಈ ಕಂದ ತನಿಗೆ ಭಾರವಾದುಲೆ. ಅವ್ಕೆ ಬುದ್ದಿ ಕಲ್ಸದಿದ್ದರೆ ತನ್ನ ಬಾಳ್ ವ್ಯರ್ಥ. ದಿವ್ಯಂಗೆ ಛಲ ಹುಟ್ಟಿತ್. ತನ್ನ ಬಾಳ್‌ನ ಮೂವತ್ತ್ ವರ್ಷಗಳ್‌ಲಿ ಏನೆಲ್ಲಾ ಆಗಕಾಯ್ತೊ ಅದೆಲ್ಲಾ ಆಗಿತ್ತ್. ಒಟ್ಟಿಗೆ ಏನೆಲ್ಲಾ ಆಗಬಾರ್ದಿತ್ತೊ ಅದೆಲ್ಲಾ ಆಗಿ ಹೋಗಿತ್ತ್. ಗ್ಯಾನ ಮಾಡ್ತಿದ್ದಂಗೆ ಅವ್ಳ ಮನ್ಸ್ ಹಿಂದಕ್ಕೆ ಓಡ್ತ್.

* * * * *

ರಾಮಯ್ಯನವರ್ದ್ ತುಂಬಿದ ಸಂಸಾರ. ನಾಲ್ಕ್ ಮಕ್ಕ ಅಪ್ಪ ಅವ್ವ ಸೇರಿ ದೊಡ್ಡ ಸಂಸಾರ ಆಗಿತ್ತ್. ರೆವಿನ್ಯೂ ಇಲಾಖೆಲಿ ಗುಮಾಸ್ತರಾಗಿದ್ದ ರಾಮಯ್ಯನವು

ನಿವೃತ್ತರಾದ ಮ್ಯಾಲೆ ತಮ್ಮ ಪಾಲಿಗೆ ಬಂದ ತೋಟ ಗದ್ದೆಗಳ್ನ ನೋಡಿಕಂಡ್ ಮನೆಲೇ ಇದ್ದೊ. ಇರಿಕೆ ಮನೆ ಇತ್. ತೋಟ ಗದ್ದೆಂದ ಜಾಸ್ತಿ ಉತ್ಪತ್ತಿ ಇಲ್ಲದಿದ್ದರೂ ಅವರ ಪೆನ್ಷನ್ ಹಣಂದ ಹಂಗೂ ಹಿಂಗೂ ಸಂಸಾರ ಸಾಗ್‌ತಿತ್. ಮಕ್ಕಳೆಲ್ಲಾ ಇನ್ನ್ ಇಪ್ಪತ್ತ್ ವಯಸ್ಸ್ ಒಳಗೆ ಇದ್ದೊ. ಮಕ್ಕ ಸಣ್ಣವು ಇರ್ಕನ ಯಾವ ತೊಂದರೆಯೂ ಇತ್ತ್‌ಲೆ. ಆದರೆ ಅವು ಬೆಳ್ದ್ ದೊಡ್ಡವು ಆಗಿ ಸ್ಕೂಲ್‌ಗೆ ಹೋಕೆ ಆದ ಮ್ಯಾಲೆ ಅವರ ಬೇಡಿಕೆಗ ಹೆಚ್ಚ್‌ತ್ತಿದ್ದೊ. ಒಬ್ಬರ ಬೇಡಿಕೆ ಪೂರೈಸ್‌ಕನ ಇನ್ನೊಬ್ಬಂದ್ ಶುರು ಆಗ್ತಿತ್. ರಾಮಯ್ಯನವ್ಕೆ ಸಾಕಪ್ಪಾತ ಅನ್ನಿಬುಟ್ಟಿತ್.

ದೊಡ್ಡಂವ ಕೃಷ್ಣ ಪಿಯುಸಿ ಪಾಸಾಕನ ಅವ್ಕೆ ಏನೋ ಒಂತರಾ ಖುಷಿ. ತಮಿಗೆ ಮುಂದೆ ಸಹಾಯ ಮಾಡ್ದುತ ಗ್ಯಾನ ಮಾಡಿದ್ದೊ. ಆದರೆ ಕಾಲೇಜಿಗೆ ಸೇರ್ದ ಕೃಷ್ಣ ಪೋಲಿ ಹೈದಗಳ ಸಹವಾಸಂದ ಮನೆಯವ್ಕೆ ಗೊತ್ತಾಗದಂಗೆ ಅಂವ ಕೆಟ್ಟ ಚಾಳಿಗಳಿಗೆ ಬಲಿಯಾಗಿತ್. ಅವನ ಚಟಗ ಕಳ್ಳತನ ಮಾಡ್‌ವಲ್ಲಿಗೆ ಮುಂದ್‌ವರ್ದ್ ರಾಮಯ್ಯನವ್ಕೆ ವಿಷ್ಯ ತಿಳ್ದ್ ಅವು ಬೆಚ್ಚಿಬಿದ್ದೊ. ತಾವು ಕಟ್ಟಿದ ಕನಸ್‌ನ ಗೋಪುರ ಪುಡಿಯಾತ್‌ತ ಕಂಗೆಟ್ಟ್‌ಹೋದೊ.

ಗ್ಯಾನ ಮಾಡಿ ಮಾಡಿ ಅವು ಹಾಸಿಗೆ ಹಿಡ್ದೊ. ಮನೆನ ಸ್ಥಿತಿ ಚಿಂತಾಜನಕ ಆಗಿಹೋತ್. ಸಂಸಾರದ ಜವಾಬ್ದಾರಿನ ಹೊರುವ ಹೊಣೆ ಈಗ ಹಿರಿಯ ಮಗಳ್ ದಿವ್ಯನ ಪಾಲಿಗೆ ಬಾತ್.

ಅವ್ಳಿಗೆ ದೂರದ ನೆಂಟರ ಸಹಾಯಂದ ಖಾಸಗಿ ಕಂಪೆನಿಲಿ ಕೆಲ್ಸ ಸಿಕ್ಕಿತ್. ರಾಮಯ್ಯನವ್ರ ಪೆನ್ಷನ್, ದಿವ್ಯನ ಸಂಬಳ ಸೇರಿ ಮನೆಯವ್ರ ಜೀವನ ಸಾಗ್‌ತಿತ್. ಕೃಷ್ಣ ಪೂರಾ ಕೆಟ್ಟ್ ಹೋಗಿತ್. ಅಂವ ಕಾಲೇಜಿಗೆ ಸರಿಯಾಗಿ ಹೋಗಿತ್ತ್‌ಲೆ. ಹೊತ್ತ್‌ಗೊತ್ತಿಲ್ಲದೆ ಮನೆಗೆ ಬಾತಿತ್. ಬಂದರೂ ಮನೆಂದನೇ ದುಡ್ಡ್ ಕದ್ದ್‌ಕಂಡ್ ಹೋಗ್ತಿತ್.

ಅಂದ್ ದಿವ್ಯ ತನ್ನ ಸಂಬಳ ದುಡ್ಡ್‌ನ ಪೆಟ್ಟಿಗೆಲಿ ಮಡ್ಗಿ ಕಾಫಿ ಕುಡಿಯಕೆ ಅಡ್ಗೆ ಮನೆಗೆ ಹೋತು. ಕೃಷ್ಣ ಅಲ್ಲಿ ಕುದ್ದ್ ಕಾಫಿ ಕುಡಿಯತಿತ್. ಅಕ್ಕನ ಕಾಂಬಕನ ಹೆದ್ರಿ ಹೊರಗೆ ಬಾತ್. ಅವ್ಳ ಪ್ರಾಮಾಣಿಕ ಕಣ್ಣ್‌ಗಳ್ನ ಎದುರ್ಸಿಕೆ ಅವಂಗೆ ಧೈರ್ಯ ಇತ್ತ್‌ಲೆ.

ಅಷ್ಟೊತ್ತಿಗೆ ಅಪರೂಪದ ನೆಂಟರ್ ಮನೆಗೆ ಬಂದೊ. ದಿವ್ಯ ಅವರ್ನ ಮಾತಾಡ್ಸಿ ಆದ ಮ್ಯಾಲೆ ಅಡಿಗೆ ಮಾಡಿಕೆ ಒಳಗೆ ಹೋತ್. ನೆಂಟರ್ ಅಂದ್ ಉಳ್ದ್ ಮಾರನೇ ದಿನ ಹೊರ್ಟು ಹೋದೋ. ಅವು ರಾಮಯ್ಯನವರ ಕಡೆ ನೆಂಟರಾಗಿದ್ದ್ ಉಸಾರಿಲ್ಲದ ಅವರ್ನ ನೊಡಿಕೆ ಬಂದಿದ್ದೊ.

ದಿವ್ಯ ಆಫೀಸಿಗೆ ಹೊರ್ಟತ್. ಬಸ್‌ಗೆ ದುಡ್ಡ್ ತೆಗೆಯಕೆತ ಪೆಟ್ಟಿಗೆ ತೆರ್ಯಕನ

ಅವ್ಳ ಎದೆ ಧಸಕ್‌ತೇಳ್ತ್. ಒಂದ್ ತಿಂಗ ಬೆವ್ರ ಸುರ್ಸಿ ದುಡ್ದ್ ಸಂಪಾದಿಸಿದ್ದ ದುಡ್ಡ್ ಮಾಯ ಆಗಿತ್ತ್. ತಕ್ಷಣ ಅವ್ಳು ಕಿರ್ಚಿಕಣ್ತ್. ಆದರೆ ಅವ್ಳ ದುಡಿಮೆನ ಫಲ ಆಗಲೇ ಕೃಷ್ಣನ ಬಳಗಲಿ ಹಂಚಿ ಹೋಗಿತ್ತ್‌ತ ಅವ್ಳಿಗೇನು ಗೊತ್ತ್.

ನಿನ್ನೆ ಬಂದಿದ್ದ ನೆಂಟರ್. ಇಂದ್ ಮಾಯ ಆಗಿರ್‍ವ ಕೃಷ್ಣ. ಮನೆ ಖರ್ಚ್‌ನ ಜವಾಬ್ದಾರಿ–ಎಷ್ಟೋ ಯೋಚನೆಗ ಅವ್ಳ ತಲೆಲಿ ತುಂಬಿಕಂಡೊ.

ಒಂದ್ ವಾರ ಕಳ್ದಿತ್ತ್. ರಾಮಯ್ಯನವ್ಕೆ ಫೋನ್ ಬಾತ್. ಕಳ್ದವಾರ ಬಂದಿದ್ದ ನೆಂಟರ್ ಫೋನ್ ಮಾಡಿದ್ದೊ. ತಮಿಗೆ ದಿವ್ಯನ ನೋಡಿ ಬಾಳಾ ಕುಶಿ ಆಗುಟ್ಟು ತಮ್ಮ ಮಂಜಂಗೆ ತಂದ್ ಕಂಬಕೆ ಆಶೆ ಉಟ್ಟುತ ಹೇಳಿ, ಸಬ್ ಇನ್ಸ್‌ಪೆಕ್ಟರಾಗಿರ್‍ವ ತಮ್ಮ ಮಂಜನೇ ದಿವ್ಯನ ನೋಡಿಕೆ ಕಳ್ಸಿದಾಗಿ ತಿಳ್ಸಿದ್ದೊ. ದಿವ್ಯಂಗೆ ತಕ್ಷಣ ಗ್ಯಾನ ಬಾತ್. ಹಿಂದೆ ಒಮ್ಮೆ ತನ್ನ ಆಫೀಸ್‌ಲಿ ಕಳ್ಳತನ ಆಗಿರ್ಕನ ಬಂದಿದ್ದ ಆ ತರುಣ ಸಬ್ ಇನ್ಸ್‌ಪೆಕ್ಟರ್‌ನ ಮುಖ ಕಣ್ಣ್ ಮುಂದೆ ತೇಲಿ ಬಾತ್. ದಿವ್ಯ ಅಂದೇ ಅವನ ನೋಟನ ಗಮನಿಸಿದ್ದರೂ ಅದನ್ನ ಮರ್ತ್‌ಬುಟ್ಟಿತ್ತ್.

ಮುಂದೆ ಕೆಲವೇ ಸಮೆಲಿ ಇಬ್ಬರ ಮದ್ವೆ ನಡ್ದ್ ಹೋಗಿತ್ತ್. ದಿವ್ಯ ಮೈಸೂರ್‌ಲಿದ್ದ ತನ್ನ ಆಫೀಸ್‌ನ ಬ್ರಾಂಚಿಗೆ ವರ್ಗ ಮಾಡ್ಸಿಕಂಡಿತ್ತ್. ಅವರ ಬಾಳ್‌ನ ರಥ ಏರುಪೇರಿಲ್ಲದಂಗೆ ಸಾಗಿತ್ತ್. ಪುಟ್ಟ ಆದಿತ್ಯ ಅವರ ಮಡಿಲ್‌ನ ತುಂಬಿತ್ತ್.

* * * * *

ದಿವ್ಯ ನೆಟ್ಟಂಗೆ ಬಳ್ಳಾರಿ ಸೆಂಟ್ರಲ್ ಜೈಲಿಗೆ ಹೋಗಿ ಅಲ್ಲಿದ್ದ ಅಧಿಕಾರಿನ ಕಂಡ್ ಕೃಷ್ಣನ ವಿಚಾರ್ಸಿತ್. ಕೃಷ್ಣನ ಕಾಂಬಕನ ಅವ್ಳಿಗೆ ತಿಳಿಯದಂಗೆ ಅವ್ಳ ಕಣ್ಣ್ಂದ ಹನಿಗ ಜಾರಿದೊ. ಗಟ್ಟಿಮುಟ್ಟಾಗಿದ್ದ ಅಂವ ಲಾಚಾರಾಗಿ ಮೂಳೆ ಚಕ್ಕಳ ಆಗಿತ್ತ್. ಅವು ಮಾತಾಡಿಕಂಡಿದ್ದಂಗೆ ಪಕ್ಕಲಿ ದಾಟಿ ಹೋದ ಆ ವ್ಯಕ್ತಿನ ಕಣ್ಣರಳಿಸಿ ನೋಡ್ತ್ ದಿವ್ಯ. ಆದರೆ ಆ ವ್ಯಕ್ತಿ ಆಗಲೇ ದಾಟಿ ಹೋಗಿ ಆಗಿತ್ತ್.

ದಿವ್ಯ ವಾಪಾಸ್ ಹೊರ್ಡ್‌ಕನ ಕೃಷ್ಣ ಗಳಗಳತ ಮರ್‍ಪ್‌ಬುಟ್ಟತ್. ಅವಂಗೆ ಈಗ ನಿಜವಾಗಿಯೂ ಪಶ್ಚಾತ್ತಾಪ ಆಗಿತ್ತ್. ಆದರೆ ಕಾಲ ಮಿಂಚಿ ಹೋಗಿತ್ತ್. ಮಾರನೇ ದಿನ ಮೈಸೂರಿಗೆ ಹೊರ್ಡಿಕೆ ಮುಂದೆ ಮತ್ತೆ ಬಂದ್ ಹೋನೆತ ಹೇಳಿ ದಿವ್ಯ ಹೊರ್ಟು ಬಾತ್. ಒಟ್ಟಿಗೆ ಆದಿತ್ಯನು ಇದ್ರಂದ ಅವ್ಳು ಜಾಸ್ತಿ ಹೊತ್ತ್ ಇತ್ತ್‌ಲೆ.

ಮಾರನೇ ದಿನ ಜೈಲ್ ಹತ್ರ ಹೋಕನ ಹಿಂದೆನ ದಿನ ಇದ್ದ ಅಧಿಕಾರಿಯೇ ಆಗಿದ್ರಂದ ಅವಳ್ನ ಜಾಸ್ತಿ ಪ್ರಶ್ನೆ ಮಾಡದೆ ಕೃಷ್ಣನ ಹತ್ರ ಕಳ್ಸಿತ್. ಕೃಷ್ಣ ಇವಳಿಗಾಗಿಯೇ ಕಾದ್‌ಕಂಡ್ ನಿತ್ತಿತ್ತ್. ಇವಳ್ನ ಕಾಂಬಕನ ಅವನ ಮುಖ ಅರಳಿತ್ತ್. ದಿವ್ಯ

ಆಶ್ಚರ್ಯಲಿ ನೋಡ್ತ್ ಹಿಂದೆನ ದಿನಕ್ಕಿಂತ ಇಂದ್ ಅಂವ ಗೆಲುವಾಗಿ ಕಂಡಿತ್ತ್. ಕುಶಿಲಿ ಮಾತಾಡ್ತ್.

ಕೃಷ್ಣನೊಟ್ಟಿಗೆ ಮಾತಾಡಿ ಇನ್ನ್ ಹೊರ್ಡಕುತೇಳ್ಕನ ಜವಾನ ಬಂದ್ "ಸಾಹೇಬರ್ ಕರ್ದವೆ"ತ ಹೇಳ್ತ್. ಕೃಷ್ಣನ ವಿಷ್ಯ ಮಾತಾಡಿಕೆ ಇರ್ದುತ ದಿವ್ಯ ಅವನ ಹಿಂದೆ ಹೊರ್ಟತ್.

ಆದಿತ್ಯ ಅವ್ಳ ಹಿಂದೇ ಇತ್ತ್. ಜವಾನ ಸಾಹೇಬರ ಚೇಂಬರ್‌ವರೆಗೆ ಬಂದ್ ಒಳಗೆ ಹೋಗಿತ ಕೈ ತೋರ್ಸಿ ಹಿಂದೆ ಬಾತ್. ದಿವ್ಯ ಒಂದು ಗಳಿಗೆ ಅಲ್ಲೆ ನಿತ್ತ್‌ಬುಡ್ತ್. ಎಂತ ಕೇಳಿವೆಯೋ ಏನೋತ. ಆದರೆ ಆದಿತ್ಯ ಆಗಲೇ ಒಳಗೆ ಹೋಗಿ ಆಗಿತ್ತ್.

ಒಳಗೆ ಹೋದ ದಿವ್ಯ ಒಮ್ಮೆಗೇ ಬೆಚ್ಚಿಬೀತ್. ಆದಿತ್ಯನ ಆ ಅಧಿಕಾರಿ ಎತ್ತಿಕಂಡ್ ತೊಡೆ ಮ್ಯಾಲೆ ಕೂರ್ಸಿಕಂಡ್ ಮುದ್ದ್ ಮಾಡ್ತಿತ್ತ್. ಇವಳ್ನ ಕಂಡಂಗೆ ಆದಿತ್ಯನ ಎತ್ತಿಕಂಡೇ ಅವ್ಳ ಹತ್ರ ಬಾತ್.

"ಆನಂದ್...." ದಿವ್ಯಂದ ಉದ್ಗಾರ ಹೊರ್ಟತ್.

"ದಿವ್ಯ ದಯವಿಟ್ಟ್ ನನ್ನ ಕ್ಷಮ್ಸಿ ಬುಡ್. ವಿಷ್ಯ ತಿಳಿಯದೆ ದುಡ್ಕಿ ತಪ್ಪು ಮಾಡಿಬುಟ್ಟೆ. ನಿನ್ನ ಮ್ಯಾಲೆ ಸಂಶಯ ಪಟ್ಟ್‌ಬುಟ್ಟೆ. ನಂಗೆ ಎಲ್ಲಾ ವಿಷ್ಯ ತಿಳ್ತ್. ಅಂದ್ ನೀನಾರ ಹೇಳಕ್ಕಾಗಿತ್ತ್."

"ಒಬ್ಬ ಕೊಲೆಗಾರನ ನನ್ನ ತಮ್ಮ ತೇಳಿಕೆ ಮನ್ಸ್ ಬಾತ್‌ಲೆ. ಅಲ್ಲದೆ ನೀವ್ ಅವ್ನ ಹುಡ್ಕುತ್ತಿದ್ದರಿ ಅಲ್ಲಾ ನಾನೇ ಹಿಡ್ದ್‌ಕೊಟ್ಟಂಗೆ ಆದೆತ ಸುಮ್ಮನಾದೆ"ತೇಳಿ ಅಲ್ಲೇ ಇದ್ದ ಕುರ್ಚಿಲಿ ಕುದ್ದ್ ಮರ್ಡಿಕೆ ಶುರ್ ಮಾಡ್ತ್. ಇಷ್ಟ್ ದಿನ ತಡ್ದ್‌ಕಂಡಿದ್ದ ಕಣ್ಣೀರ್ ಹೊಳೆಯಾಗಿ ಹರ್ತ್. ಅವ್ಳ ಹತ್ರ ಕುದ್ದ ಆನಂದ್, ಅವ್ಳ ದುಃಖ ಕಮ್ಮಿಯಾಕೆ ಮುಟ್ಟೆ ಅವ್ಳ ತಲೆನ ಸವರ್ತಾ ಇತ್ತ್. ಪುಟ್ಟ ಆದಿತ್ಯಾ ಏನೂ ಅರ್ಥವಾಗದೆ ಪಿಳಿಪಿಳಿ ಕಣ್ಣ್‌ಬುಟ್ಟ್ ನೋಡ್ತಿತ್ತ್.

* * * * *

ಹಿಂದೆನ ದಿನ ತಾನೆ ಜೈಲ್ ಸೂಪರಿಂಟೆಂಡೆಂಟ್ ಆಗಿ ಚಾರ್ಜ್ ತಗಂಡಿದ್ದ ಆನಂದ್ ಆ ಖೈದಿನ ಕಂಡ್ ರೋಷಲಿ ಹಲ್ಲ್ ಕಚ್ಚಿತ್ತ್. ತಮ್ಮ ಸುಂದರ ಬದುಕುಲಿ ವಿಷ ಬಿಂದುವಾಗಿ ಬಂದಿದ್ದ್ ವ್ಯಕ್ತಿ ಅದೂ ಖೈದಿ ಸ್ಥಾನಲಿ!

ಸ್ವಲ್ಪ ಹೊತ್ತಿಗೆಲ್ಲಾ ಅಲ್ಲಿಗೆ ಬಂದ ದಿವ್ಯನ ಕಂಡ್ ಸಿಟ್ಟ್‌ಲಿ ಅಲ್ಲಿಂದ ಹೊರ್ಟ್

ಹೋಗಿತ್ತ್. ದಿವ್ಯ ಹೊರ್ಟು ಹೋದ ಮ್ಯಾಲೆ ಕುತೂಹಲಂದ ಆ ಖೈದಿನ ಕರ್ದ್ ವಿಚಾರಣೆ ಮಾಡ್ತ್. ನಿಜ ಸ್ಥಿತಿ ತಿಳ್ದ್ ತನ್ನ ಅವಿವೇಕಕ್ಕೆ ತಾನೇ ಅಸಹ್ಯ ಪಟ್ಟ್‌ಕಣ್ತ್. ತನ್ನ ಆತುರದ ನಿರ್ಧಾರಂದ ತನ್ನ ಬಾಳ್‌ನ ತಾನೇ ಹಾಳ್ ಮಾಡಿಕಂಡಿತ್ತ್.

ಮಾರನೇ ದಿನ ದಿವ್ಯ ಮತ್ತೆ ಬಂದದೆತ ತಿಳ್ದ್ ಕುಶಿಲಿ ತನ್ನ ತಪ್ಪುನ ಒಪ್ಪಿಕಣಿಕೆ ಸಿದ್ಧನಾಗಿ ಕುದ್ದಿತ್ತ್.

ಆನಂದ ಮತ್ತೆ ಹೇಳ್ತ್ "ನಾ ತಪ್ಪು ಮಾಡಿ ಬುಟ್ಟೆ"ತ ಪಶ್ಚಾತ್ತಾಪಲಿ.

"ತಪ್ಪು ನನ್ನದೆ. ಅಂದ್ ಕೊಲೆಗಾರನ ತಮ್ಮ ತೇಳಿಕೆ ನನ್ನ ಸ್ವಾಭಿಮಾನ ಅಡ್ಡ ಬಾತ್"

"ನಿಮ್ಮಿಬ್ಬರ ಬಾಳ್‌ನ ಹಾಳ್ ಮಾಡ್ದ ಈ ಪಾಪಿನ ಕ್ಷಮಿಸಿ ಬುಡಿ"ತೇಳ್ತ್. ಆಗ ತಾನೆ ಒಳಗೆ ಬಂದ ಕೃಷ್ಣ. ಅಂವ ಅಕ್ಕ ಬಾವನ ಕಾಲಿಗೆ ನಮಸ್ಕಾರ ಮಾಡ್ತ್.

ಮತ್ತೆ ಇನ್ನ್ ಎಂದೂ ಇಂತಹ ಕೆಟ್ಟ ಕೆಲ್ಸ ಮಾಡ್ದುಲೆ. ನನ್ನ ಶಿಕ್ಷೆ ಮುಗ್ದ ಮ್ಯಾಲೆ ಹೊಸ ಮನ್ಸನಾಗಿ ಬಾಳ್ನೆತ ಕೃಷ್ಣ ಆಣೆ ಮಾಡಿ ಹೇಳ್ತ್.

"ಇನ್ನ್ ಸ್ವಲ್ಪ ದಿನ ದಿವ್ಯ ನೀನ್ ಕೆಲ್ಸ ಬುಟ್ಟ್ ಬಂದ್ ಬುಡ್. ನೀನ್ ಇಷ್ಟ್ ದಿನ ಒಂಟಿಯಾಗಿ ಕಷ್ಟಪಟ್ಟದ್ ಸಾಕ್"

"ಸರಿ" ತೇಳ್ತ್ ದಿವ್ಯ. ಅವ್ಳಿಗೂ ಒಂಟಿಬಾಳ್ ಸಾಕಾಗಿ ಹೋಗಿತ್ತ್.

"ಇಂದ್ ಇಲ್ಲೇ ಇರಿ. ನಾಳೆ ರಜ ಹಾಕಿ ಎಲ್ಲವೂ ಹೋಗಿ ನಿನ್ನ ಸಾಮಾನೆಲ್ಲಾ ತಂದ್ ಬುಡ್ವೊ. ಹಂಗೆ ರಾಜೀನಾಮೆ ಪತ್ರನ ರೆಡಿ ಮಾಡಿಬುಡ್"

ದಿವ್ಯಂಗೆ ಎಲ್ಲಾ ಅಯೋಮಯ ಆಗಿತ್ತ್. ಅವ್ಳು ಎಲ್ಲಕ್ಕೂ ತಲೆ ಆಡ್ಸ್‌ತ್ತಿತ್ತ್.

* * * * *

ಆನಂದ್‌ನ ಶಿಫಾರಸ್ಸ್‌ಂದ ಸ್ವಾತಂತ್ರ್ಯ ದಿನಾಚರಣೆ ದಿನ ಕೃಷ್ಣಂಗೆ ಬಿಡುಗಡೆ ಆಗಿತ್ತ್. ಅವ್ನ ಬಿಡುಗಡೆ ದಿನ ದಿವ್ಯ, ಆದಿತ್ಯ ಸಹ ಜೈಲ್ ಹತ್ರ ಹೋಗಿದ್ವೊ. ಆನಂದ್ ಕೃಷ್ಣಂಗೆ ಒಳ್ಳ ಡಾಕ್ಟರ್ ಹತ್ರ ಮದ್ದ್ ಕೊಡ್ಸಿದ್ರಂದ ಅಂವ ಈಗ ಉಸಾರಾಗಿತ್ತ್.

ಕುಶಿಲಿ ಜೈಲ್‌ಂದ ಜೊತೆ ಜೊತೆಲಿ ಜೈಲ್ ಗೇಟ್‌ನ ದಾಟ್‌ತಿದ್ದ ದಿವ್ಯ-ಆನಂದ ಮತ್ತೆ ಆದಿತ್ಯ-ಕೃಷ್ಣನ ಅಲ್ಲಿದ್ದ ಎಲ್ಲರ ಕಣ್ಣ್‌ಗ ಆಶ್ಚರ್ಯಲಿ ನೋಡುತ್ತಿದ್ವೊ.

* * * * *

# ಪರಿವರ್ತನೆ

"ಸುಮಾ ನಾಳೆ ಬ್ಯಾಂಕಿಗೆ ರಜ ಹಾಕಿ ಬಾ, ಹೈದನ ಕಡೆಯವು ನಿನ್ನ ನೋಡಿಕೆ ಬಂದವೆ"

ಅಮ್ಮ ಹೇಳ್ಕನ ಸುಮನ ಮುಖ ನಾಚಿಕೆಲಿ ಕೆಂಪಾತ್. ಅವ್ಳ ಮನ್ಸು ಅರಳಿ ಹೂವಾತ್. ಕಾರಣ ಹೊತ್ತಾರೆಂದೇ ಮನೆಲಿ ನಾಳೆ ಬರ್‍ವ ಹೈದನ ವಿಷ್ಯದ ಬಗ್ಗೆ ಮಾತುಕತೆ ನಡಿಯತಿತ್ತ್. ಎಲ್ಲವ್ಕೂ ಹೈದ ಒಪ್ಪಿಗೆ ಆಗಿತ್ತ್. ಹೈದನೂ ಯಾವ್ದೋ ಮದ್ವೆಲಿ ಸುಮನ ನೋಡಿ ಮೆಚ್ಚಿಕಂಡಿತ್ತ್. ಆದರೂ ಪದ್ಧತಿ ಪ್ರಕಾರ ಹೈದನ ಮನೆಯವು ಹೆಣ್ಣ್ ಕೇಳಿಕೆ ಬರ್‍ತಾ ಇದ್ದೊ.

ಹೈದ ಪದವಿ ಓದಿ, ಸರ್ಕಾರಿ ಕೆಲ್ಸಲಿ ಇತ್ತ್. ನೋಡಿಕೆ ಲಕ್ಷಣವಾಗಿತ್ತ್. ಆಸ್ತಿಪಾಸ್ತಿ ಇಲ್ಲದಿದ್ದರೂ ಇಬ್ಬರೂ ಚಾಕ್ರಿಲಿ ಇದ್ರಂದ ಮುಂದಕ್ಕೆ ಸಂಪಾದನೆ ಮಾಡಕ್‌ತೇಳ್ವ ಕಾರಣಂದ ಯಾರೂ ಆಸ್ತಿನ ಬಗ್ಗೆ ತಲೆ ಕೆಡ್ಸಿಕಂಡಿತ್ತ್‌ಲೆ.

ಉಭಯ ಕಡೆಯವ್ರ ಒಪ್ಪಿಗೆಂದ ಗೌಜಿಲಿ ಮದ್ವೆ ನಡ್ದಿತ್ತ್. ಸುಮ ಎಲ್ಲಾ ಗೂಡೆಗಳಂಗೆ ತನ್ನ ಗಂಡನ ಬಗ್ಗೆ ಪೊರ್ಲುನ ಕನ್ಸ್‌ನ ಮನೆ ಕಟ್ಟಿ ಅದ್ರಲ್ಲಿ ಸುಖವಾಗಿ ಸಂಸಾರ ಮಾಡ್ವ ಕನ್ಸ್ ಕಂಡಿತ್ತ್.

ಆದರೆ, ಮದ್ವೆ ಆದ ಮ್ಯಾಲೆ ಅವ್ಳು ಎದ್ರುಸಕಾಗಿದ್ದ

ಪರಿಸ್ಥಿತಿ ಅವ್ಳು ಗ್ಯಾನ ಮಾಡ್ದಕ್ಕಿಂತ ಬೇರೆನೇ ಆಗಿತ್ತ್. ನಾಲ್ಕ್‌ಜನ ಅಣ್ಣಂದ್‌ರ್ ನಾಲ್ಕ್ ಜನ ಅಕ್ಕಂದ್ರ ದೊಡ್ಡ ಸಂಸಾರಲಿ ಕಡೆಯವನಾಗಿದ್ದ ರಮೇಶ. ದೊಡ್ಡವ್ರ ಹ್ಯಾಳೆಂದೊ ಅಥ್‌ವಾ ಬುದ್ಧಿ ಹೇಳವು ಇಲ್ಲದೆನೋ ವಳ್ಳ ನಡತೆ ಹೊಂದಿತ್ತ್‌ಲೆ. ಮದ್ವೆಗೆ ಮುಂದೆ ಸುಮಾರ್ ವರ್ಷಂದೇ ಚಾಕ್ರಿಲಿ ಇದ್ದರೂ, ಒಂದು ಪೈಸ ಉಳ್ಸಿತ್‌ಲೆ. ಅಣ್ಣಂದ್ರ್ ಅಕ್ಕಂದ್ರ್ ಅವರವರದೇ ಸಂಸಾರಲಿ ಮುಳ್ಗಿ ಹೋಗಿದ್ದೊ. ತಾನೇ ಸಾಲ ಮಾಡಿ ಮದ್ವೆ ಆಗಿತ್ತ್.

ರಮೇಶ ತನ್ನ ಮದ್ವೆಲಿ ಸಿಕ್ಕಿದ ದುಡ್ಡ್‌ನ ಪೂರ್ತಿ ಲೆಕ್ಕ ಹಾಕಿಕೆ ಮುಂದೆನೇ ಅಣ್ಣಂದ್ರ್ ತಾವು ಕೊಟ್ಟ ದುಡ್ಡ್‌ನ ವಸೂಲಿಗೆ ಶುರುಮಾಡಿದ್ದೊ.

ಅಕ್ಕಂದ್ರ್ ತಾವು ಹಿಂದೆಂದೋ ಮಾಡಿದ್ದ ಹಣದ ರೂಪದ ಸಹಾಯನ ಸಾಲ ಆಗಿ ಪರಿವರ್ತಿಸಿ ವಸೂಲಿ ಮಾಡಿಕೆ ಮುಂದಾಗಿದ್ದೊ.

ಸ್ವಲ್ಪ ಸಮಯ ಕಳಿಯಕನ ರಮೇಶ ಸುಮನೊಟ್ಟಿಗೆ ದುಡ್ಡ್ ಕೇಳಿಕೆ ಶುರು ಮಾಡ್ಕನ ಸುಮಂಗೆ ನಿಜಕ್ಕೂ ಭ್ರಮ ನಿರಸನ ಆಗಿತ್ತ್. ತನ್ನ ಗಂಡ ಜವಾಬ್ದಾರಿ ಇಲ್ಲದವತ ಅವ್ಳಿಗೆ ತಿಳ್ದ್ ಹೋಗಿತ್ತ್. ದಾಂಪತ್ಯ ಜೀವನನೂ ಯಾಂತ್ರಿಕವಾಗಿ ನಡ್ದಿತ್ತ್. ಅಲ್ಲಿ ಪ್ರೀತಿಯ ಅಂಶವೇ ಇತ್ತ್‌ಲೆ.

ಒಂದೆರಡ್ ವರ್ಷ ಅಂವ ಮದ್ವೆಗೆ ಮಾಡಿದ್ದ ಸಾಲ ತೀರ್ಸುದ್ರಲ್ಲೇ ಕಳ್ದ್ ಹೋಗಿತ್ತ್. ಇಬ್ಬರೂ ಒಂದೇ ಊರ್‌ಲಿ ಚಾಕ್ರಿಲಿ ಇದ್ರಂದ ಅವು ಬಾಡಿಗೆ ಮನೆ ಮಾಡಿದ್ದೊ. ಶುರುನ ಮೂರು ವರ್ಷ ಹಂಗೂ ಹಿಂಗೂ ಸ್ವಲ್ಪ ಮಟ್ಟಿಗೆ ಲಾಯ್ಕಲೇ ಜೀವನ ಕಳ್ದಿದ್ದೊ.

ಅಲ್ಲಿಗೆ ಮುಟ್ಟ ಆಫೀಸ್ ಬುಟ್ಟಂಗೆ ಮನೆಗೆ ಬಾತಿದ್ದಂವ ಬರ್ತಾ ಬರ್ತಾ ತಡ ಮಾಡಿಕಂಡ್ ಬಾಕೆ ಶುರು ಮಾಡ್ತ್. ಆಗೆಲ್ಲಾ ಏನಾರ ಒಂದು ನೆವನ ಹೇಳ್ತಿತ್ತ್. ಕಡೆಲಿ ತಿಳ್ದದ್ದೇ ಬೇರೆ. ರಮೇಶ ಇಸ್ಪೀಟಿನ ದಾಸ ಆಗಿತ್ತ್. ಆಡಿಕೆ ಸಾಲ ಮಾಡ್ದು ಮತ್ತೆ ಸಂಬಳಲಿ ಸಾಲ ತೀರ್ಸುದು. ಸಂಬಳ ಕಮ್ಮಿಯಾಕನ ಮನೆನ ಜವಾಬ್ದಾರಿಂದ ನುಣ್‌ಚಿಕಂಬತ್ತಿತ್ತ್. ಇದ್ರಂದ ಸುಮ ಶುರುಗೆ ವಳ್ಳೆ ಮಾತ್‌ಲಿ ಹೇಳ್ತ್ ಮತ್ತೆ ಪ್ರತಿಭಟಿಸಿತ್, ಮರ್ಲ್ಹತ್, ಜಗಳ ಮಾಡ್ತ್. ಒಂದೆರಡ್ ದಿನ ಸರಿ ಇರ್ತಿತ್ತ್. ಇನ್ನ್ ಖಂಡಿತ ಹಿಂಗೆ ಮಾಡ್ದುಲೆತ ಪ್ರಮಾಣ ಮಾಡ್ದು, ಮತ್ತೆ ಕಲ್ತ ಚಾಳಿನ ಮುಂದುವರ್ಸಿತ್. ಇದ್ ಪ್ರತಿ ತಿಂಗಳ ಕತೆ ಆತ್. ಗಾದೆ ಉಟ್ಟಲ್ಲ, 'ಹೆಂಡ್ರ್‌ನಾದ್ರ್ ಬುಟ್ಟೇನ್ ಕಲ್ತದ್ ಬುಡ್ಕಿಲೆ'. ಹಂಗೇ ಆಗಿತ್ತ್ ರಮೇಶನ ಕತೆ.

ಸುಮಂಗೆ ದಿಕ್ಕೇ ತೋಚದಂಗೆ ಆತ್. ತನ್ನ ಸಂಸಾರದ ಗುಟ್ಟ್ ಯಾರೊಟ್ಟಿಗೂ

ಹೇಳಿಕಂಬಂಗೆ ಇಲ್ಲೆ. ಆದರೆ ಎಷ್ಟ್ ದಿನ ಮುಚ್ಚಿ ಮಡ್ಗಿಕೆ ಸಾಧ್ಯ. ಮನೆಗೆ ನೆಂಟರಿಷ್ಟರ್ ಬಾಕನ ರಮೇಶ ಮನೆಲಿ ಇರ್ತಿತ್ತ್‌ಲೆ. ಸುಮ ತನಿಗೆ ತಿಳ್ದ ಸುಳ್ಳ್‌ನೆಲ್ಲಾ ಹೇಳ್‌ತಿತ್ತ್. ಆದರೆ, ಸತ್ಯ ಹೊರಗೆ ಬಾಕೆ ಬಾಳ ದಿನ ಬೇಕಾತ್‌ಲೆ. ರಮೇಶ "ಹೇಳ್ದ ಮಾತ್ ಕೇಳ್ದುಲೆ ಸ್ವಂತ ಬುದ್ಧಿ ಇಲ್ಲದ" ಗುಂಪಿಗೆ ಸೇರಿತ್ತ್. ಸುಮ ತನ್ನ ಒಬ್ಬಳ ಸಂಬಳಂದ ಇಡೀ ಮನೆ ಖರ್ಚ್ ವೆಚ್ಚನ ತೂಗಿಸಕಾಗಿತ್ತ್. ಎರಡ್ ಮಕ್ಕ ಒಟ್ಟಿಗೆ ಅತ್ತೆ ಮಾವ ಕೂಸ್‌ನ ನೋಡಿಕಂಬ ಜನ ಹೊತ್ತ್ ಗೊತ್ತಿಲ್ಲದೆ ಮನೆಗೆ ಬರ್ವ ಗಂಡ ಮನೆಗೆ ಬರ್ವ ನೆಂಟರ್‌ಗ. ರಮೇಶ ಎಷ್ಟೋ ತಿಂಗ ಸಂಬಳನೇ ಮನೆಗೆ ಕೊಡ್ತಿತ್ತ್‌ಲೆ. ಸುಮಂಗೆ ತಲೆ ಚಿಟ್ಟ್ ಹಿಡಿಯತಿತ್ತ್. ಅತ್ತೆ ಮಾಂವಂಗೆ ಶುರುಂದೇ ಅಭ್ಯಾಸ ಆಗಿದ್ರಂದ ಅವ್ಕೆ ತಮ್ಮ ಮಂಜನ ತಪ್ಪು ದೊಡ್ಡದಾಗಿ ಕಾಂಬತಿತ್‌ಲೆ. ಒಟ್ಟಿಗೆ ಸುಮ ತಾನ್ ಉಪವಾಸ ಇದ್ದರೂ ಅವ್ಕೆ ಕಮ್ಮಿ ಮಾಡ್ತಿತ್‌ಲೆ. ಸುಮಂಗೆ ಪುಸ್ಕಟೆಯಾಗಿ ಸಿಕ್ಕ್‌ತಿದ್ದದ್ ಕಣ್ಣೀರ್ ಮಾತ್ರ. ತನ್ನ ಕಷ್ಟ ಕಾಲಕೆಂತ ಜೋಪಾನ ಮಾಡ್‌ತಿದ್ದ ದುಡ್ಡೆಲ್ಲಾ ರಮೇಶ ಸಂಬಳದ ಹಣ ಮನೆಗೆ ಕೊಡದ ತಿಂಗ ಕರ್ಗಿ ಹೋತಿತ್ತ್.

ಕೂಸ್‌ನಂತ ಮನಸ್ ಇದ್ದ ಸುಮ ಬರ್ತಾ ಬರ್ತಾ ಕಠಿಣಳಾಗಿ ಬುಡ್ತ್. ಭಂಡತನಂದ ತನ್ನ ಅನ್ನಕ್ಕೆ ಬಂದ್ ಬೀಳ್‌ವ ಗಂಡತೇಳ್ವ ಪ್ರಾಣಿತೇಳ್ರೆ ಅಸಹ್ಯವಾಗುವಷ್ಟ್ ಅವ್ಳು ರೋಸಿಹೋಗಿತ್ತ್.

ಯಾವುದೇ ವಸ್ತುನ ತಾಕೆ ಅಂಗಡಿಗೆ ಕಳ್ಸಿರೂ ಆ ದುಡ್ಡ್‌ನ ತಕಂಡ್ ಹೋಗಿ ಆಡಿ ಬಾತಿತ್ತ್. ಇದ್ರಂದಾಗಿ ಮನೆ ಸಾಮಾನ್ ತಾಕೆ ತಾನೇ ಅಂಗಡಿಗೂ ಹೋಕಾಗಿತ್ತ್. ಒಮ್ಮೆ ಕೂಸ್‌ಗೆ ಜ್ವರ ಬಂದಿರ್ಕನ ಮದ್ದ್ ತಾಕೆ ದುಡ್ಡ್ ಕೊಟ್ಟರೆ ಅದ್ನ ಸಹ ಹೋಗಿ ಆಡಿ ಕಳ್ದ್ ಬಂದಿತ್ತ್.

"ಇಸ್ಪೀಟಿನ ಸಂಗಾತಿ ಸುಳ್ಳ್" – ರಮೇಸ ಸುಳ್ಳು ಹೇಳುದ್ರಲ್ಲಿ ನಿಸ್ಸೀಮ ಆಗಿತ್ತ್. ಪ್ರತಿ ಸಲ ಹಣ ಕಳ್ದ್ ಬಾಕನ ಹೊಸ ಹೊಸ ಸುಳ್ಳ್‌ನ ಸೃಷ್ಟಿ ಮಾಡಿ ಹೇಳ್ತಿತ್ತ್.

ಬರ್ತಾ ಬರ್ತಾ ಸಂಬಳ ತಕಂಡ ಮ್ಯಾಲೆ ಎರ್ಡ್ ಮೂರ್ ದಿನ ಮನೆಗೇ ಬಾತಿತ್ತ್‌ಲೆ. ಆಡಿ ಉಳ್ದರೆ ಆತ್, ಇಲ್ಲರೆ ಬರಿಗೈಲಿ ಮನೆಗೆ ಬಾತಿತ್ತ್. ಸುಮ ಮರ್ಗ್ ಮರ್ಗ್ ಅವ್ಳ ಕಣ್ಣೀರೇ ಬತ್ತಿ ಹೋಗಿತ್ತ್.

ಎಷ್ಟೋ ಸಲ ಅವ್ಳು ಸತ್ತ್ ಬುಟ್ನೆತ ಗ್ಯಾನ ಮಾಡಿತ್ತ್. ಆದರೆ ಮುದ್ದು ಮಕ್ಕಳ ಮುಖ ನೋಡ್ಕನ ಅವ್ಳ ನಿರ್ಧಾರ ಬದ್ಲಾಗ್‌ತಿತ್ತ್. ಮಕ್ಕಳ ತಬ್ಬಲಿ

ಮಾಡಿ ಹೋಕೆ ಮನ್ಸೇ ಬಾತಿತ್ತ್‌ಲೆ.

ತಮ್ಮ ಸ್ಥಿತಿ ಲಾಯ್ಕ ಇರ್ಕನ ಮತ್ತೆ ರಮೇಶ ಕೆಟ್ಟ ಚಾಳಿಯ ಪರಿಚಯ ಎಲ್ಲವ್ಕೂ ತಿಳಿಯಕೆ ಮುಟ್ಟ ಬಂದ್ ಹೋಗಿ ಮಾಡ್ತಿದ್ದ ನೆಂಟರಿಷ್ಟರ್ ಬರ್ತಾ ಬರ್ತಾ ಯಾರೂ ಇತ್ತ ಮುಖ ಹಾಕ್‌ತಿತ್ತ್‌ಲೆ. ಇದ್ರಂದ ಸುಮಂಗೆ ಒಂದ್ ವಿಧಲಿ ದುಃಖ ಆದರೂ, ನೆಂಟ್ರಿಗೆ ಮಾಡಿ ಹಾಕುವ ಖರ್ಚ್‌ಂದ ತನ್ನ ಮಕ್ಕಳ ಹೊಟ್ಟೆ ತುಂಬಿಸಕ್‌ತೇಳಿ ನೆಮ್ಮದಿಯಾಗಿತ್ತ್. ನೋಡುವವರ ಕಣ್ಣಿಗೆ ಗಂಡ ಹೆಣ್ಣ್‌ನಂಗೆ ಕಂಡರೂ ಒಳಗೊಳಗೆ ಇವರಿಬ್ಬರ್‌ಲಿ ಯಾವುದೇ ಸಂಬಂಧ ಉಳ್ದಿತ್ತ್‌ಲೆ.

ಈ ನಡುಲಿ ಅತ್ತೆ ಮಾವಂದರಿಗೆ ಇವರ ಕಷ್ಟಂದ ಅವರ ಸುಖ ಜೀವನಕ್ಕೆ ಸ್ವಲ್ಪ ಕಷ್ಟವಾದ್ರಂದ ಬ್ಯಾರೆ ಮಕ್ಕಳ ಮನೆಗೆ ಜಾರಿದೊ. ಇದ್ರಂದ ಸುಮಂಗೆ ನೆಮ್ಮದಿ ಆತ್.

ಸುಮನ ಪ್ರಪಂಚತೇಳ್ರೆ ತನ್ನ ಮಕ್ಕ ಮಾತ್ರ. ಅವರ್‍ನ ಲಾಯ್ಕಲಿ ಓದ್ಸಿ ಒಂದ್ ದಾರಿಗೆ ಸೇರ್ಸುದೇ ಅವಳ ಗುರಿಯಾಗಿತ್ತ್. ಮಕ್ಕ ಸಹ ಸರಿಯಾದ ಪೋಷಣೆ ಇಲ್ಲದೆ ಬಡವಾಗಿದ್ದೊ. ವಳ್ಳ ಬಟ್ಟೆ ಸಹ ಇತ್ತ್‌ಲೆ. ಇದೆಲ್ಲಾ ನೋಡಿ ಸುಮನ ಕರುಳ್ ಚುರುಕ್‌ತೇಳ್ತಿತ್ತ್.

ಹಿಂಗೇ ಎಷ್ಟೋ ವರ್ಷಗ ಕಳ್ದ್ ಹೋದೊ. ರಮೇಶ ಎಲ್ಲೆಲ್ಲಿ ಸಾಲ ಸಿಕ್ಕಿದೋ ಅಲ್ಲೆಲ್ಲಾ ಸಾಲ ಮಾಡಿತ್ತ್. ಸಾಲಗಾರರ್ ಮನೆಗೆ ಬಾಕೆ ಶುರು ಆಕನ ಸುಮ ಸುಸ್ತಾಗಿ ಬುಟ್ಟ್.

ಇದೇ ಸಮೆಲಿ ಅಪ್ಪನ ಸ್ನೇಹಿತರಾಗಿದ್ದ ಸೋಮಯ್ಯನವು ಸುಮನ ಬ್ಯಾಂಕಿಗೆ ಮ್ಯಾನೇಜರಾಗಿ ಬಂದೊ. ಯಾಗೊಲೂ ಬಾಡಿದ ಮುಖ ಹೊತ್ತು ಬ್ಯಾಂಕಿಗೆ ಬರ್‍ವ ಸುಮನ ಕಂಡರೆ ಅವ್ಕೆ ಅನುಕಂಪ ಮೂಡ್‌ತ್ತಿತ್ತ್. ಅವಳ್ನ ಹೆಂಗೆ ಕೇಳ್ದುತೇಳ್ವ ಅಳುಕು ಅವ್ಕೆ. ಅವ್ಕೆ ಅವ್ಳದೇ ವಯಸ್ಸ್‌ನ ಮಗಳ್ ಇತ್ತ್. ಅವ್ಳು ಸುಖವಾಗಿ ಸಂಸಾರ ಮಾಡಿಕೊಂಡಿತ್ತ್. ಅವ್ಳಿಗೂ ಇವ್ಳಿಗೂ ಹೋಲ್ಸಿರೆ ಅಜಗಜಾಂತರ ವ್ಯತ್ಯಾಸ ಇತ್ತ್.

ಒಂದ್ ದಿನ ಸೋಮಯ್ಯನವು ಸುಮನ ಕರ್ದ್ ಅವ್ರ ಚೇಂಬರ್‌ಲಿ ಕೂರ್ಸಿಕಂಡ್ ವಿಚಾರ್ಸ್‌ಕನ ಸುಮನ ದುಃಖನ ಕಟ್ಟೆ ಒಡ್ದ್ ಹೋತ್. ಇದ್‌ಕೆ ಮುಟ್ಟ ಯಾರೂ ಅವಳ್ನ ಇಷ್ಟೊಂದು ಪ್ರೀತಿಂದ ಕಷ್ಟ ಸುಖ ವಿಚಾರಿಸಿತ್ತ್‌ಲೆ. ಅವ್ಳ ಮನೆಯವು ಸಹ ತಿಳ್ದೂ ತಿಳಿಯದಂಗೆ ಇದ್ದ್‌ಬುಟ್ಟೊ. ಸ್ವಾಭಿಮಾನಿಯಾಗಿದ್ದ ಸುಮ ಸಹ

ತನ್ನ ಕಷ್ಟ ಹೇಳಿಕಂಡ್ ತವರಿಗೆ ಹೋದವಳಲ್ಲ.

ಸುಮನ ಕಣ್ಣೀರ್ ಮುಗಿಯಕ್ಕೆ ಮುಟ್ಟ ಸುಮ್ಮನಿದ್ದ ಸೋಮಯ್ಯನವು ತಾವು ತನ್ನ ಕೈಲಾದ ಸಹಾಯ ಮಾಡ್ನೆತ ಭರವಸೆ ಕೊಟ್ಟ ಮ್ಯಾಲೆ ಸುಮ ತನ್ನ ಗೋಳ್‌ನ ಕತೆನ ಹೇಳಿಕಂಡತ್. ಅವ್ಳ ಕತೆ ಕೇಳಿ ಅವ್ರ ಕಣ್ಣ್‌ಲಿ ಸಹ ನೀರ್ ಬಾತ್. ಅವ್ಳಿಗೆ ಬದ್ಕ್‌ಲಿ ಮುಂದೆ ಬಾಕೆ ಧೈರ್ಯ ತುಂಬಿದೊ. ತಮ್ಮ ಮನೆಗೆ ಕರ್‍ಕೊಂಡ್ ಹೋಗಿ ತಮ್ಮ ಹೆಣ್ಣಿಗೆ ಪರಿಚಯ ಮಾಡ್ಸಿಕೊಟ್ಟೊ. ಜಾನಕಿನವು ಅವಳ್ನ ತಮ್ಮ ಮಗಳಂಗೆ ಉಪಚಾರ ಮಾಡ್ದೊ.

ಮುಂದೆ ಹದಿನೈದೇ ದಿನಲಿ ತಮ್ಮ ಪರಿಚಯದವು ಮ್ಯಾನೇಜರಾಗಿದ್ದ ದೂರದ ಬ್ರಾಂಚಿಗೆ ಅವಳ್ನ ವರ್ಗ ಮಾಡ್ಸಿದೊ. ತಾವೇ ಮುಂದೆ ನಿತ್ತ್ ಅವ್ಳಿಗೆ ಎಲ್ಲಾ ವ್ಯವಸ್ಥೆ ಮಾಡಿಕೊಟ್ಟೊ. ಬಾಡಿಗೆ ಮನೆ ಮಾಡಿಕೊಟ್ಟ್ ಮಕ್ಕಳ್ನ ಶಾಲೆಗೆ ಸೇರ್‍ಸದ್ರಂದ ಹಿಡ್ದ್ ಪ್ರತಿಯೊಂದ್ ರೀತಿಲೂ ಅವು ಅವ್ಳಿಗೆ ಸಹಾಯ ಮಾಡ್ದೊ.

ಇಷ್ಟೆಲ್ಲಾ ಆದರೂ ರಮೇಶಂಗೆ ಇದ್ ಗೊತ್ತೇ ಆತ್‌ಲೆ. ಎಂದ್‌ನಂಗೆ ಸಂಬಳ ತಕಂಡ್ ಎರ್ಡ್ ಮೂರ್ ದಿನ ಇಸ್ಪೀಟ್–ರೇಸು ತೇಳಿ ಮಜಾ ಮಾಡಿ ಮನೆಗೆ ಬಂದ್ ಇಡೀ ವಠಾರ ಕೇಳುವಂಗೆ ಮಧ್ಯ ರಾತ್ರಿ ಕಾಲಿಂಗ್ ಬೆಲ್ಲ್ ಒತ್ತ್‌ಕನ ಪಕ್ಕದ ಮನೆಲೇ ಇದ್ದ ಮನೆ ಓನರ್ ಬಂದ್ ಸುಮ ಮನೆ ಖಾಲಿ ಮಾಡ್ದ ವಿಷ್ಯ ತಿಳ್ಸ್‌ಕನೇ ಅಂವ ಬಾಗ್‌ಲಿಗೆ ಹಾಕಿದ ಬೀಗನ ನೋಡ್ದ್. ಅವನ ಮತ್ತ್ ಇಳ್ದ್‌ಹೋಗಿತ್ತ್. ಕಾಲೆಳ್‌ದ್‌ಕಂಡ್ ಅಲ್ಲಿಂದ ಹೋದಂವ ಮತ್ತೆ ಬಂದ್ ಜಗಲಿಲೇ ರಾತ್ರಿ ಪೂರಾ ಕಳ್ತ್.

ಸುಮನ ಮನೆ ಓನರ್‌ಗೆ ಮತ್ತೆ ನೆರೆಕರೆಯವ್ಕೆ ಬಾಳ ಇಷ್ಟ ಇತ್ತ್. ಹೊರ್‍ಡಿಕೆ ಮುಂದೆ ಎಲ್ಲವ್ಕೂ ವಿಷ್ಯ ತಿಳ್ಸಿ ಗಂಡಂಗೆ ತಾನ್ ಇರ್‍ವ ಜಾಗ ತಿಳ್ಸ್‌ಬಡೀತ ಭಾರದ ಮನ್ಸ್‌ಂದ ಹೇಳಿ ಹೋಗಿತ್ತ್. ರಮೇಶನ ಬಗ್ಗೆ ಯಾರಿಗೂ ಕನಿಕರ ಸಹ ಇತ್ತ್‌ಲೆ. ಬೆಳಿಗ್ಗೆ ಮನೆ ಓನರ್ ಸುಮ ಇಟ್ಟ್ ಹೋಗಿದ್ದ ಅವನ ಹಾಸಿಗೆ ಬಟ್ಟೆಗಳ್ನ ಅವಂಗೆ ಕೊಟ್ಟೊ.

ರಮೇಶ ಪಾತಾಳಕ್ಕೆ ಇಳ್ದ್ ಹೋತ್. ಅಂವ ಈಗ ತಬ್ಬಲಿನಂಗೆ ಆಗಿತ್ತ್. ಅವಂಗೆ ಇದೇ ಮೊದ್ಲಿಗೆ ಸುಮ ಇಲ್ಲದ ಬ್ಯಾನೆ ಕಾಡಿಕೆ ಶುರು ಆತ್. ಆದರೆ ಕಾಲ ಮಿಂಚಿ ಹೋಗಿತ್ತ್. ಕೆಟ್ಟ ಮೇಲೆ ಬುದ್ಧಿ ಬಂದರೆ ಏನ್ ಫಲ. ಕೈಲಿ ಕಾಸ್ ಇತ್ತ್‌ಲೆ. ಸುಮ ಇರ್‍ಕನ ಭಂಡತನಂದ ಹೆದರ್‍ಸಿ ಬೆದರ್‍ಸಿ ಊಟ ಮಾಡ್‌ತ್ತಿತ್ತ್. ಎಷ್ಟೋ ದಿನ ಸುಮ ಅರೆಹೊಟ್ಟೆ, ಬರಿ ಹೊಟ್ಟೆಲಿ ಮಲ್ಗಿತ್ತ್. ಮಕ್ಕಳ್ನ ಸಹ ಒಂದ್ ಸಲ ವಿಚಾರ್‍ಸಿದಂವ ಅಲ್ಲ. ಅವುಕೆ ಪಾಠ ಹೇಳಿ ಕೊಟ್ಟವನಲ್ಲ. ಎಷ್ಟೋ ದಿನ ಮಕ್ಕ ಅಪ್ಪನ ಮುಖ ನೋಡಿಕೆ ಆತಿತ್‌ಲೆ. ಯಾಕೆತೇಳ್ರೆ ಮಕ್ಕ ಮಲ್ಗಿದ್ದ

ಮ್ಯಾಲೆ ಮನೆಗೆ ಬಾತಿತ್ತ್. ಮಕ್ಕ ಏಳಿಕೆ ಮುಂದೆ ಮನೆಂದ ಹೋಗಿ ಆತಿತ್ತ್. ಹಂಗಾಗಿ ಮಕ್ಕಳಿಗೆ ಅಪ್ಪತೇಳ್ವ ಯಾವ ಅಕ್ಕರೆನೂ ಇತ್ತ್‌ಲೆ. ಅವ್ಕೆ ಅಮ್ಮನೇ ಸರ್ವಸ್ವ.

ರಮೇಶನ ಅವಸ್ಥೆನ ನೋಡಿ ಮನೆ ಓನರ್ ಒಂದ್ ವಾರದ ಮಟ್ಟಿಗೆ ಉಳ್ಕಣಿಕೆ ಒಂದ್ ಸಣ್ಣ ಕೋಂಬರೆನ ಬಿಟ್ಟ್‌ಕೊಟ್ಟಿದ್ದೊ.

ರಮೇಶ ಬ್ಯಾಂಕಿಗೆ ಹೋಗಿ ವಿಚಾರ್ಸಿರೂ ಸುಮನ ಅಡ್ರೆಸ್ ಸಿಕ್ಕಿತ್ತ್‌ಲೆ. ಅದ್ರ ಬದ್ಲಿಗೆ ಮ್ಯಾನೇಜರ್ ಸೋಮಯ್ಯನವು ಅವಳ್ನ ಇನ್ನಾರ ಬದ್ಕಿಕೆ ಬುಡ್‌ತೇಳಿ ಚೀಮಾರಿ ಹಾಕಿ ಕಳ್ಸಿದೊ.

ರಮೇಶ ಊಟ ನಿದ್ದೆ ಸರಿಯಿಲ್ಲದೆ ಕಂಗಾಲಾತ್. ಒಟ್ಟಿಗೆ ಮನೆ ಓನರ್ ಯಾಗ ಕೋಂಬರೆನ ಖಾಲಿ ಮಾಡಿಯಾತ ಕೇಳಿಕೆ ಶುರು ಮಾಡ್ದೊ. ಬ್ಯಾರೆ ಎಲ್ಲಿಯೂ ಅವಂಗೆ ಇರಿಕೆ ಒಂದ್ ಕೋಂಬರೆ ಸಿಕ್ಕತ್ಲೆ. ಸಿಕ್ಕಿರೂ ಅಡ್ವಾನ್ಸ್ ಕೊಡ್ಕೆ ಅವನತ್ರ ದುಡ್ಡ್ ಇತ್ತ್‌ಲೆ.

ಅವರ ಇಸ್ಪೀಟಾಟದ ಸ್ನೇಹಿತರೆಲ್ಲಾ ಮುಖ ತಿರ್‍ಗಿಸಿದ್ದೊ. ಈಗ ಅವಂಗೆ ಸುಮ ಮತ್ತೆ ಮಕ್ಕಳ ಗ್ಯಾನ ಬಾಳಾ ಆಗಿತ್ತಿತ್ತ್. ತಾನ್ ಸುಮಂಗೆ ಬಾಳಾ ಅನ್ಯಾಯ ಮಾಡಿಬುಟ್ಟೆತ ಮರ್‍ಡಿತ್ತ್. ತನ್ನ ಕೈಯಾರೆ ತನ್ನ ಬದ್ಕ್‌ನೊಟ್ಟಿಗೆ ಮುಗ್ಧ ಸುಮ ಮತ್ತೆ ಮಕ್ಕಳ ಬದ್ಕಿಗೆ ಅಂವ ಕಿಚ್ಚ್ ಹಚ್ಚಿತ್ತ್.

ಸೋಮಯ್ಯನವು ರಮೇಶಂದ ಸುಮನ ದೂರ ಮಾಡಿಕೆ ಕಾರಣ ಇತ್ತ್. ಇಬ್ಬರೂ ಒಟ್ಟೊಟ್ಟಿಗೆ ಇದ್ದರೆ ಸುಮನ ಬೆಲೆ ರಮೇಶಂಗೆ ಗೊತ್ತಾಗ್‌ತಿತ್ತ್‌ಲೆ. ರಮೇಶ ತನ್ನ ತಪ್ಪ್‌ನ ತಿದ್ದಿಕಂಡ್ ಸರಿಯಾದ ಮ್ಯಾಲೆ ಅವರಿಬ್ರನ್ನ ಒಟ್ಟಿಗೆ ಸೇರ್‍ಸುದು ಅವರ ಗ್ಯಾನ ಆಗಿತ್ತ್. ಅದ್ರಂದ ರಮೇಶನ ಸಹ ಅವು ಗಮನಿಸಿಕಂಡೇ ಇದ್ದೊ.

ಸ್ವಲ್ಪ ವರ್ಷಗಳೇ ಕಳ್ದ್ ಹೋಗಿದ್ದೊ. ಮಕ್ಕ ಎಲ್ಲಾ ಬೆಳ್ದ್ ದೊಡ್ಡವರಾಗಿದ್ದೊ. ಸುಮಂಗೆ ರಮೇಶ ಇಲ್ಲದ ಕೊರತೆ ಬುಟ್ರೆ ಬದ್ಕ್ ಪ್ರಶಾಂತವಾಗಿತ್ತ್. ಹಿಂದೆನ ನೆಮ್ಮದಿ ಕೆಡ್ಸುವ ಯಾವ ಘಟನೆಗಳ್ಗೆ ಅವಕಾಶವಿತ್ತ್‌ಲೆ. ಮಕ್ಕ ಸಹ ಒಳ್ಳೆ ಪರಿಸರಲಿ ಲಾಯ್ಕ ಬೆಳ್ದಿದ್ದೊ. ಅವ್ಕೆ ಹೆಚ್ಚ್ ಕಮ್ಮಿ ರಮೇಶನ ಗ್ಯಾನ ಮಾಸತೊಡ್ಗಿತ್ತ್. ಸುಮ ಅಪ್ಪ-ಅಮ್ಮ ಎರ್‍ಡೂ ಆಗಿ ಅವರ್‍ನ ಬೆಳ್ಸಿತ್ತ್. ಇದ್ದದ್ರಲ್ಲಿ ಅಚ್ಚುಕಟ್ಟಾಗಿ ಸಂಸಾರ ಸಾಗಿತ್ತ್. ಸುಮಂಗೆ ಪ್ರಮೋಷನ್ ಸಿಕ್ಕಿತ್. ಅದ್ರಂದ ಅವ್ಳ ಸಂಬಳನೂ ಜಾಸ್ತಿ ಆಗಿತ್ತ್. ರಮೇಶ ಮಾತ್ರ ಗುರ್ತೇ ಸಿಕ್ಕದಂತೆ ಬದ್ಲಾಗಿತ್ತ್. ಕೆದ್ರಿದ ತಲೆ, ಮುದುರಿದ ಬಟ್ಟೆ, ಆರೈಕೆ ಇಲ್ಲದ ಶರೀರ ಎಲ್ಲವ್ಕೂ ವಿಷ್ಯ ತಿಳಿದಿದ್ರಂದ ಎಲ್ಲವೂ ಅವ್ನ ಹೀಯಾಳ್ಸಿ ನಗಾಡ್ತಿದ್ದೊ. ಕೆಲ್ಸ ಮಾಡ್ವ ಜಾಗಲೂ ಅವಂಗೆ ಬೆಲೆ ಇತ್ತ್‌ಲೆ.

ಅಂವ ಈಗ ಇಷ್ಟೀಟಾಟ ಬುಟ್ಟಿತ್ತ್ ತನ್ನ ಪೋರ್ಲುನ ಬಡ್ಕೇ ನೆಲೆ ತಪ್ಪಿದ ದೋಣಿನಂಗೆ ಆದ ಮ್ಯಾಲೆ ಅವಂಗೆ ಬುದ್ಧಿ ಬಂದಿತ್ತ್.

ಒಂದ್ ದಿನ. ಆಫೀಸ್‌ಲಿ ಕೆಲ್ಸ ಮಾಡ್ಕಂಡ್ ಇರ್ಕನ ಸ್ವಲ್ಪ ಸಮೆಂದ ಅಂಟಿಕೊಂಡಿದ್ದ ಬಿಡದೇ ಬಾತಿದ್ದ ಕೆಮ್ಮ್‌ಂದ ರಕ್ತಕಾರಿ ಅಂವ ಸ್ವಯತಪ್ಪಿ ಬೀತ್. ಆಫೀಸ್‌ಲಿ ಇದ್ದವು ಎಲ್ಲಾ ಸೇರಿ ಅವನ ಆಸ್ಪತ್ರೆಗೆ ಸೇರ್ಸಿದೊ. ಡಾಕ್ಟರ್ ಅವನ ಪರೀಕ್ಷೆ ಮಾಡಿ ಅವಂಗೆ ಕ್ಷಯ ರೋಗ ಬಂದುಟ್ಟುತ ಹೇಳ್ದೊ. ಅವನ ಯಾರೂ ನೋಡಿಕಂಬವು ಇತ್ತ್‌ಲೆ. ಆಗೊಮ್ಮೆ ಈಗೊಮ್ಮೆ ಬಾತಿದ್ದ ಅವನ ಜೊತೆಯವು ತಮಿಗೆ ಎಲ್ಲಿ ಅಂಟಿ ಬುಡ್ದೋತ ದೂರಂದ ನೋಡಿ ಹೋಗ್‌ತಿದ್ದೊ.

ಸೋಮಯ್ಯನವು ರಿಟೈರ್ಡ್ ಆಗಿ ಅದೇ ಊರ್‌ಲಿ ಮನೆ ಮಾಡಿಕಂಡಿದ್ದೊ. ಸ್ವಲ್ಪ ದಿನ ಕಳ್ದ ಮ್ಯಾಲೆ ಅವ್ಕೆ ವಿಷ್ಯ ಗೊತ್ತಾತ್. ಇನ್ನ್ ತಡ ಮಾಡ್ದು ಸರಿಯಲ್ಲತೇಳಿ ಅವು ಸುಮಂಗೆ ವಿಷ್ಯ ತಿಳ್ಸಿ ಕರ್ಕಂಡ್ ಬಂದೊ.

ಸುಮನ ಕಂಡ್ ರಮೇಶನ ಕಣ್ಣ್‌ಲಿ ನೀರ್ ಹರಿಯಕೆ ಶುರು ಆತ್. ಸುಮ ಮುಜುಗರ ಪಡದೆ ಮೂಳೆ ಚಕ್ಕಳ ಆಗಿದ್ದ ರಮೇಶಂಗೆ ವಳ್ಳ ಮದ್ದ್ ಕೊಡ್ಸಿತ್. ರಮೇಶನ ಹತ್ರ ಈಗ ದುಡ್ಡ ಇತ್ತ್. ಆದರೆ ಅವಂಗೆ ಅವನವರಾಗಿ ಯಾರೂ ಇತ್ತ್‌ಲೆ.

ರಮೆಶ ಸರಿ ಹೋಕೆ ಕೆಲವು ತಿಂಗಗಳೇ ಬೇಕಾದೊ. ಅಂವ ಸ್ವಲ್ಪ ಚೇತರಿಸಿಕಣಿಕೆ ಮುಟ್ಟ ಸುಮ ಬ್ಯಾಂಕಿಗೆ ರಜ ಹಾಕಿತ್. ಒಂದ್ ಕಾಲಲಿ ಅವನ ಹೆಣ್ಣ್ ಆಗಿದ್ದ ಒಂದೇ ಕಾರಣಕ್ಕೆ ಮನುಷ್ಯತ್ವಂದ ಅವನ ಸೇವೆ ಮಾಡಿತ್ತ್. ಮತ್ತೆ ವಾರಕ್ಕೊಮ್ಮೆ ಬಂದ್ ನೋಡಿಕಂಡ್ ಹೋಗ್‌ತಿತ್ತ್.

ಅದ್ ಒಂದ್ ಕರ್ತವ್ಯತೇಳ್ವಂಗೆ ತನ್ನ ಕೆಲ್ಸ ಮಾಡಿತ್ತ್. ಮಕ್ಕ ಸಹ ಕೆಲವು ಸಲ ಬಂದ್ ಹೋಗಿದ್ದೊ.

ರಮೇಶನ ಕಾಯಿಲೆ ಪೂರ್ತಿ ವಾಸಿಯಾದ ಮ್ಯಾಲೆ ಒಂದ್ ದಿನ ಡಾಕ್ಟರ್ ಮಾರನೆ ದಿನ ಡಿಸ್‌ಚಾರ್ಜ್ ಮಾಡಿ ಮನೆಗೆ ಕಳ್ಸಿನೆತ ಹೇಳ್ಕನ ಸುಮ ಮೌನವಾಗಿಬುಡ್ತ್. ಅಬ್ಳಿಗೆ ಅವನ ಮನೆಗೆ ಸೇರ್ಸಿಕಂಡ್ ಹಳೇ ಕತೆಗ ಮತ್ತೆ ಶುರು ಆದು ಬೇಕಿತ್ತ್‌ಲೆ. ಆದರೆ, ಮಕ್ಕ ಈಗ ಅಪ್ಪಂಗಾಗಿ ಹಂಬಲಿಸ್‌ತಿದ್ದೊ. ಬೇರೆ ಮಕ್ಕ ತಮ್ಮ ಅಪ್ಪಂದ್ರೊಟ್ಟಿಗೆ ತಿರ್ಗ್‌ಕನ ಅವು ಮೌನವಾಗಿರ್‌ತಿದ್ದೊ.

ರಮೇಶ ಪೂರ್ತಿ ಮಂಕಾತ್. ಆಸ್ಪತ್ರೆಲಿ ಇದ್ದಷ್ಟ್ ದಿನ ಬೇರೆಯವ್ರಿಂದ ಉಪಚಾರ ಪಡ್ದವಂಗೆ ತನ್ನ ಒಂಟಿತನದ ಬಡ್ಕನ ಗ್ಯಾನ ಮಾಡಿ ಹೆದ್ರಿಕೆ ಆತ್.

ಸುಮ ಮೌನಂದ ಅವನ ಬಟ್ಟೆ ಮತ್ತೆ ಬೇರೆ ಸಾಮಾನ್‌ಗಳ್ನ ತಲೆ ಬಗ್ಗ್‌ಸಿ ಬ್ಯಾಗಿಗೆ ತುಂಬಿಸ್‌ತಿತ್ತ್.

ಇದ್ದಕ್ಕಿದ್ದಂಗೆ ಅವ್ಳ ಕೈಗಳ್ನ ಹಿಡ್ಕಂಡ ರಮೇಶ, "ಪ್ಲೀಸ್, ಸುಮ ಈ ಸಲ ನನ್ನ ಬುಟ್ಟ್ ಹೋದರೆ ನಾನ್ ಖಂಡಿತ ಉಳಿಯಲ್ಲೆ. ಈಗ ನಾನ್ ಹೊಸ ಮನ್ಸನಾಗೊಳೆ. ಇದೊಮ್ಮೆ ಅವಕಾಶ ಕೊಟ್ಟು ನೋಡ್. ನಿನ್ನ ನಂಬಿಕೆಗೆ ದ್ರೋಹ ಮಾಡ್ದುಲೆ"ತೇಳಿ ಮರ್ಡಿಕೆ ಶುರು ಮಾಡ್ತ್.

ಅದೆ ಸಮೆಗೆ ಒಳಗೆ ಬಂದ ಸೋಮಯ್ಯ ಮತ್ತೆ ಜಾನಕಿನವು, "ಸುಮ, ನಾವ್ ಎಲ್ಲಾ ಕೇಳ್ಸಿಕಂಡೊ. ಹೆಣ್ಣ್‌ನ ಕ್ಷಮಯಾಧರಿತ್ರಿತೇಳ್ವೆ ಅವ್ನ ಕ್ಷಮಿಸಿಬುಡ್. ಮಕ್ಕಳಿಗಾಗಿ ಆದರೂ ನೀವ್ ಒಂದಾಗಿ ಬಾಳ್ದು ವಳ್ಳದ್."ತೇಳ್ದೊ.

ಸುಮ ತಲೆ ಎತ್ತಿ ರಮೇಶನ ನೋಡ್ತ್. ಅಲ್ಲಿ ಅವ್ವನ ಹಂಬಲಿಸುವ ಕೂಸ್‌ನ ದೈನ್ಯತೆ ಇತ್ತ್. ಸುಮ ಸೋಮಯ್ಯನವ್ರ ಹತ್ರ ಅವ್ರ ಕೆಮಿಲಿ ಮೆಲ್ಲೆ ಎಂತೋ ಹೇಳ್ತ್. ಸೋಮಯ್ಯನವು ಅದ್ಕೆ ತಲೆ ಆಡ್ಸಿದೊ.

ಮಾರನೇ ದಿನ ಹೊತ್ತಾರೆ ಸುಮನ ಕಾದ್‌ಕಂಡ್ ಇದ್ದವಂಗೆ ಬಾಡಿಗೆ ಕಾರ್ ತಕಂಡ್ ಬಂದ ಸೋಮಯ್ಯನವರ್ನ ಕಂಡ್, ಅಂವ ಭೂಮಿಗೆ ಇಳ್ದ್ ಹೋತ್.

"ನಡಿ ರಮೇಶ ಸಧ್ಯಕ್ಕೆ ನಮ್ಮ ಮನೆಗೆ ಪೋಯಿ"ತೇಳ್ದೊ ಸೋಮಯ್ಯನವು ಡಿಸ್‌ಚಾರ್ಜ್ ಆದ ಮ್ಯಾಲೆ ಆಸ್ಪತ್ರೆಲಿ ಇರುವಂಗೆ ಇಲ್ಲೆ. ಹಿಂದೆನ ದಿನನೇ ಆಸ್ಪತ್ರೆ ಬಿಲ್ಲ್‌ನ ಸುಮ ಕಟ್ಟಿಹೋಗಿತ್ತ್.

ಒಂದೆರಡ್ ಗಂಟೆ ಪ್ರಯಾಣ ಮಾಡ್ದ ಮ್ಯಾಲೆ ಒಂದ್ ಸಣ್ಣ ಮನೆ ಮುಂದೆ ಟ್ಯಾಕ್ಸಿ ನಿತ್ತತ್. ಮೈಯೆಲ್ಲಾ ಹಿಡಿಯಾಗಿ ಇಳ್ದ ರಮೇಶ ಸೋಮಯ್ಯನವ್ರ ಹಿಂದೆ ಹೋತ್.

ಇವು ಬಾಗ್ಲಿಗೆ ಬಂದ್ ಎತ್ತ್‌ಕನ ಬಾಗ್ಲ್ ದೊಡ್ಡದಾಗಿ ತೆರ್ದ್‌ಕಣ್ತ್.

"ವೆಲ್ ಕಂ ಹೋಂ ಡ್ಯಾಡಿ" ತೇಳಿ ಮಕ್ಕ ಒಟ್ಟಿಗೆ ಸ್ವಾಗತ ಮಾಡ್ದೊ.

ಪೊರ್ಲುಲಿ ಸಿಂಗಾರ ಮಾಡಿಕಂಡಿದ್ದ ಸುಮ ಬಂದ್ ಇವರ್ನ ವಳಗೆ ಬರ ಮಾಡಿಕಣ್ತ್.

ಒಂದ್ ಗಳಿಗೆ ಇಬ್ಬರ ಕಣ್ಣ್‌ಗ ಕೂಡ್ದೊ. ಸೋಮಯ್ಯನವು ತಮ್ಮ ಪ್ರಯತ್ನ ಫಲಕೊಡ್ತ್‌ತೇಳಿ ದೇವ್ರಿಗೆ ಕೈಮುಗ್ದ್ ನೆಮ್ಮದಿಲಿ ಉಸ್‌ರ್ ಬುಟ್ಟೊ. ರಮೇಶ–ಸುಮ ಇಬ್ಬರೂ ಸೋಮಯ್ಯನವ್ರ ಕಾಲ್ ಹಿಡ್ದ್ ನಮಸ್ಕಾರ ಮಾಡ್ದೊ. ಅವು ಮನಸಾರೆ 'ಲಾಯ್ಕ ಇರಿ'ತ ಆಶೀರ್ವಾದ ಮಾಡ್ದೊ.

## ಅರಿವು ಮೂಡಿತ್ತ್

"ಮುತ್ತವ್ವಾ..."

'ಇದ್ಯಾರಪ್ಪಾ ಈಗ ಮತ್ತೆ' ಈಗ ತಾನೆ ಚೋಂದವ್ವನ ಸಾಗ ಹಾಕಿದಾತ್. ಇನ್ನ್ ಆ ಮಾತ್‌ನ ಮಲ್ಲಿ ಪೊನ್ನವ್ವ ಬಂದ್ ಬುಟ್ರೆ ಮುಗ್ದೇ ಹೋತ್! ಅಡ್ಗೆ ಕೋಣೆಲಿ ಸಾರಿಗೆ ತರಕಾರಿ ಕೊಯ್ತಿದ್ದ ಮುತ್ತವ್ವ ಗೊಣ್ಗಿಕಂಡೇ ಕುದ್ದಲ್ಲಿಂದೇ ಕೇಳ್ದೊ,

"ಯಾರ್..."

"ನಾನ್ ಪೊನ್ನವ್ವ..."

'ಓ ತೂತ್ ಬಾಯಿನ ಪೊನ್ನವ್ವ ಬಂದೇ ಬುಡ್ತ್'ತೇಳಿ ಸಿಡ್ಕಿಕಂಡೇ ಎದ್ದ್ ಬಂದ್ ಬಾಗಿಲ್ ತೆರ್ತ್. ಮನ್ಸ್‌ಲೇ ಕುಶಿಂದ ಕನಸ್ ಕಾಣ್ತಾ ಗಡಿಬಿಡಿಲಿ ಇದ್ದ ಮುತ್ತವ್ವನವ್ಕೆ ರಸಭಂಗವಾದಂಗಾಗಿತ್ತ್.

"ಏನ್ ಮುತ್ತವ್ವ ಬಾರಿ ಕುಶಿಲಿ ಇದ್ದಂಗೆ ಕಂಡದೆ, ಏನ್ ಸಮಾಚಾರ"

ಹೌದು ಪೊನ್ನವ್ವ ಇಂದ್ ನಮ್ಮ ಸೀಮಾನ ನೋಡಿಕೆ ಗಂಡ್‌ನ ಕಡೆಯವು ಬಂದವೆ"

"ಹೌದಾ ಬಾಳಾ ಸಂತೋಷ. ಗಂಡ್ ಯಾರ್?" ಇಷ್ಟಗಲ ಬಾಯಿ ತೆರ್ತ್ ಪೊನ್ನವ್ವ.

"ಅದೇ, ಆಚೆಕರೆ ಶಾಂತಿನ ಕಡೆಯಂವ, ಹೈದ ಲಕ್ಷಣವಾಗುಟ್ಟು, ಬುದ್ಧಿವಂತ, ಅನೂಕೂಲಸ್ಥರುತ ಹೇಳಿಟ್ಟು"

"ಹೈದಂಗೆ ಚಾಕರಿ ಇಲ್ಲೆನಾ"

"ಹೈದ ಬೆಂಗಳೂರ್‌ಲಿ ಇಂಜಿನಿಯರಾಗುಟ್ಟಂತೆ"

"ಹಂಗಾರೆ ಸೀಮಾ ತುಂಬಾ ಅದೃಷ್ಟವಂತಳೆ. ಅದ್ಸರಿ, ಸೀಮ ಇದ್ಕೆ ಒಪ್ಪಿಟ್ಟಾ"?

"ಅವ್ಳಿಗೆಂತ ಗೊತ್ತಾದೆ. ಪಾಪ ಅವ್ಳು ಇನ್ನೂ ಕಾಲೇಜ್‌ಲಿ ಓದುತುಟ್ಟು. ಈ ವರ್ಷ ಫೈನಲ್ ಇಯರ್ ಅಲಾ ಎಲ್ಲಾ ಸರಿ ಆದರೆ ಅವ್ಳ ಪರೀಕ್ಷೆ ಕಳ್ದಂಗೆ ಮದ್ವೆ ಮಾಡನತ ಗ್ಯಾನ ಮಾಡ್ಯೊಳೊ."

"ನೋಡಿ ಮುತ್ತವ್ವಾ, ನೀವ್ ಏನೇ ಹೇಳಿ ವಯಸ್ಸಿಗೆ ಬಂದ ಹೆಣ್ಮಕ್ಕಳಿಗೆ ಬೇಗ ಮದ್ವೆ ಮಾಡಿಬಿಡಕು. ಇಲ್ಲರೆ ಕೆಟ್ಟ ಹೆಸ್ರು ಬಂದದೆ"

ಮುತ್ತವ್ವನ ತಲೆ ಒಂದ್ ಗಳಿಗೆ ತಿರ್‍ಗಿದಂಗೆ ಆತ್. ಹಂಗಾರೆ ನಾನ್ ಕೇಳ್ದ ಸುದ್ದಿ ನಿಜ ಇರ್‍ದಾ? ಎಲ್ಲವ್ಕೂ ಗೊತ್ತುಟ್ಟು. ನಂಗೆ ಮಾತ್ರ ಗೊತ್ತಿಲ್ಲೆ. ತಾನ್ ಮಗಳ್ನ ಸರಿಯಾಗಿ ಬೆಳ್ಸಿವಳೆತ ತಿಳ್ಕಂಡದ್ ತಪ್ಪಾತಾ? ಇಂದ್ ಅವ್ಳಿಗೆ ಸರಿಯಾಗಿ ಬುದ್ಧಿ ಹೇಳಕುತ ಗ್ಯಾನ ಮಾಡ್ತ್. ಆದರೆ ಅವ್ಳ ಮುಖ ನೋಡ್ಕನ ಅವ್ಳು ಹಂಗೆ ಇರ್‍ಕಿಲೆತ ನಾಲಿಗೆಲಿ ಮಾತ್ ಬರ್‍ತಿತ್ತ್‌ಲೆ.

"ಅಯ್ಯೋ, ನಾನ್ ಬಂದ ವಿಷ್ಯನೇ ಮರ್‍ತ್ ಬುಟ್ಟೆ. ಮುತ್ತವ್ವ ಮನೆಲಿ ಸಕ್ಕರೆ ಮುಗ್ದ್ ಹೋಗುಟ್ಟು. ಒಂದ್ ಕಪ್ ಸಕ್ಕರೆ ಕೊಟ್ರೆ ಒಂದ್ ವಾರಲಿ ಕೊಟ್ನೆ"

"ಪರ್‍ವಾಗಿಲ್ಲೆ ತಕಣಿ"ತೇಳಿ ಅಲ್ಲಿಂದ ಸಾಗ ಹಾಕಿ ತನ್ನ ಅಡ್ಗೆ ಕೆಲ್ಸ ಶುರುಮಾಡ್ತ್.

ಮುತ್ತವ್ವಂಗೆ ತಲೆಲಿ ನೂರಾರೂ ಗ್ಯಾನಗ ಸುಳ್ದ್ ಹೋದೊ. ಅಷ್ಟೊತ್ತಿಗೆ ಬೆಲ್ ಸದ್ದ್ ಕೇಳ್ಸಿತ್. 'ಇದ್ಯಾರಪ್ಪಾ ಮತ್ತೆ ಗ್ರಹಚಾರ'ತೇಳಿ ಬಾಗ್ಲ್ ತೆಗ್ದೊ.

ಮಾರ್ಕೆಟಿಗೆ ಹೋಗಿದ್ದ ಮಾಚಯ್ಯನವು ವಾಪಾಸು ಬಂದಿದ್ದೊ. ಮುತ್ತವ್ವನವು ಆಶ್ಚರ್ಯಲಿ ಗಡಿಯಾರದ ಕಡೆ ನೋಡ್ದೊ. ಅದ್ ಆಗಲೇ ಒಂದ್ ಗಂಟೆ ತೋರ್‌ಸ್ತಿತ್ತ್.

"ಇದೆಂತನೆ ಮುತ್ತು ವಳ್ಳೆ ಗುಂಡ್ ಕಲ್ಲ್‌ನಂಗೆ ನಿತ್ತ್‌ಬುಟ್ಟ ಎಂತಾತ್"

"ಎಂತ ಇಲ್ಲೆ. ಇಷ್ಟ್ ಹೊತ್ತಾದೇ ಗೊತ್ತಾತ್‌ಲೆ. ಅಡ್ಗೆನೇ ಆತ್‌ಲೆ. ಆ ಪೊನ್ನವ್ವ ಬಂದಿದ್ದೊ. ಅವರ್‍ನ ಸಾಗ ಹಾಕಿಕೆ ಇಷ್ಟ್ ಹೊತ್ತಾತ್ ನೋಡಿ" ನಿಟ್ಟುಸುರ್ ಬುಟ್ಟ್ ಹೇಳ್ತ್ ಮುತ್ತವ್ವ.

"ಪರ್‍ವಾಗಿಲ್ಲೆ ಬುಡ್ ಬೇಗ ಮಾಡ್ರೆ ಆತ್ ಸೀಮಾ ಇನ್ನೂ ಬಾತ್ಲೆನಾ"

"ಯಾಕೋ ಬಾತ್ಲೆಪ್ಪಾ, ಹನ್ನೆರಡ್ ಗಂಟೆಗೇ ಬನ್ನೆತ ಹೇಳಿತ್ತ್"

ಮಾಚಯ್ಯನವು ಊಟ ಮಾಡಿ ಒಂದ್ ಸಣ್ಣ ನಿದ್ದೆ ಮಾಡಿ ಎದ್ದ್ ಬಾಕನ ಮುತ್ತವ್ವ ನಾಕ್ ಗಂಟೆಗೆ ಇರ್ವ ತಿಂಡಿನ ತಯಾರಿ ಮಾಡಿಕಂಡಿದ್ದೊ.

ಈಗ ಇಬ್ಬರ ಎದೆಗ ಹೊಡ್ಕಣಿಕೆ ಶುರು ಆತ್. ಆಗಲೇ ಮೂರು ಗಂಟೆ ದಾಟಿತ್ತ್. ಇನ್ನೇನ್ ಎರ್ಡ್ ಗಂಟೆ ಒಳಗೆ ನೆಂಟರ್ ಬಂದವೆತ ತಿಳ್ಸಿದ್ದೊ.

ಮುತ್ತವ್ವನ ಮನ್ಸ್‌ಲಿ ಸಂಶಯ ಬಾಕೆ ಶುರು ಆತ್. ಈಗೀಗ ಸೀಮಾ ಅವ್ಕೆ ಬಿಡ್ಸಲಾಗದ ಒಗಟಾಗಿತ್ತ್. ನೆಂಟರ್ ಬಂದವೆತ ಹೇಳ್ಕನ ಅವ್ಳ ಮುಖ ಬಾಡಿ ಹೋಗಿತ್ತ್. ಆದರೂ ಮುತ್ತವ್ವನವ್ಕೆ ಅವ್ಳು ಹಂಗೆ ಮಾಡ್ಕಿಲೆತೇಳ್ವ ನಂಬಿಕೆ. ಅವ್ಕೆ ಇಪ್ಪತ್ತೆರಡರ ಸೀಮಾ ಇನ್ನೂ ಕೂಸುತೇಳ್ವ ಗ್ಯಾನ.

ಈಗೀಗ ಅವ್ಳು ಕಾಲೇಜ್‌ಂದ ಸರಿಯಾದ ಸಮೆಲಿ ಮನೆಗೆ ಬಾತಿತ್ತ್‌ಲೆ. ಮುಂದೆ ಐದ್ ಗಂಟೆಗೆಲ್ಲಾ ಮನೆಲಿ ಇರ್ತಿದ್ದವ್ಳು ಈಗೀಗ ಸ್ಪೆಷಲ್ ಕ್ಲಾಸ್ ಅದ್ ಇದ್‌ತ ಆರ್-ಏಳ್ ಗಂಟೆ ಆಗ್ತಿತ್ತ್.

ಮಾಚಯ್ಯನವ್ಕೆ ಸಿಟ್ಟ್ ಏರತೊಡಗಿತ್ತ್. 'ಸೀಮಾ ಯಾಕೆ ಹಿಂಗೆ ಮಾಡ್ತ್. ದಾರಿಲಿ ಏನಾರ ಆಗಿರ್ದಾ'ತೇಳಿ ಗ್ಯಾನ ಮಾಡ್ದೊ.

ಮುತ್ತವ್ವನವ್ಕೆ ಒಮ್ಮೆಗೆ ಎದ್ರು ಮನೆ ರಜನಿಗೆ ಆದಂಗೆ ಏನಾರ ಆಗಿರ್ದಾತ ನೆನ್ದ್ ಗಾಬರಿ ಆತ್. ಸ್ವಲ್ಪ ದಿನದ ಹಿಂದೆ ರಜನಿಗೆ ಕಾಲೇಜ್‌ಂದ ಬಾಕನ ಕಾರ್ ಆಕ್ಸಿಡೆಂಟ್ ಆಗಿತ್ತ್. ದೇವರೇ ನಮ್ಮ ಸೀಮಾಂಗೆ ಏನೂ ಆಗದರಿಲಿತ ಮನ್ಸ್‌ಲೇ ದೇವ್ರಿಗೆ ಕೈ ಮುಗ್ದೊ."

ಅಷ್ಟೊತ್ತಿಗೆ ಬೆಲ್ಲ್ ಆತ್. ಸೀಮಾ ಬಾತ್‌ತೇಳಿ ಅವಸರಲಿ ಬಾಗಿಲ್ ತೆಗಿಯಕೆ ಆಚೆ ಕರೆ ಶಾಂತಿ ನಿತ್ತಿತ್ತ್.

"ಅಂಕಲ್, ಇಂದ್ ನೆಂಟರ್ ಬಾದುಲೆತ ತಿಳ್ಸಿವಳೊ"ತೇಳ್ತ್.

"ಯಾಕೆ ಶಾಂತಿ ಏನಾತ್"

"ಗೊತ್ತ್‌ಲೆ ಅಂಕಲ್, ತಿಳ್ಸಿಬುಡ್‌ತ ಹೇಳ್ದೊ ಅಷ್ಟೆ. ನಂಗೆ ಅರ್ಜೆಂಟ್ ಉಟ್ಟು ಬನ್ನೆತ" ಹೊರ್ಟು ಹೋತ್.

ಮಾಚಯ್ಯನವ್ಕೆ ಮುಖಕ್ಕೆ ಹೊಡ್ದಂಗೆ ಆಗಿತ್ತ್. ಸೀಮಾ ಬಾರದೆ ಇರ್ದಕ್ಕೂ ಇದಕ್ಕೂ ಏನಾರ ಸಂಬಂಧ ಉಟ್ಟಾ? ಅವ್ರ ಮನ್ಸ್ ಕಲ್ಪನೆನ ಗುಲಾಮ ಆಗಿತ್ತ್. ಎಷ್ಟೋ ಹೊತ್ತ್ ಹಂಗೇ ನಿತ್ತಿದ್ದೊ ಮಾಚಯ್ಯನವು.

"ತಗಣಿ ಅಂಕಲ್ ಈ ಕಾಗದ. ನಿಮ್ಮ ಮಗ್ಳು ಸೀಮಾ ಕೊಟ್ಟು ಬುಡುತ

ಹೇಳಿ ಕೊಟ್ಟುತ್"ತೇಳ್ವ ಎದ್ರು ಮನೆ ಹೈದನ ಸ್ವರ ಕೇಳಿ ಒಮ್ಮೆ ಬೆಚ್ಚಿ ಬಿದ್ದ್.

ಸೀಮಾನ ಕಾಗದನಾ, ಮಾಚಯ್ಯನವ್ಕೆ ಶಾಕ್ ಹೊಡ್ದಂಗೆ ಆಗಿತ್ತ್.

ಹೌದು ಅಂಕಲ್ ಅವ್ಳ ಕಾಲೇಜ್ ಹತ್ರ ಕೊಟ್ಟತ್ತ್. ಅವ್ಳ ಬೈಕ್‌ಲಿ ಯಾರೊಟ್ಟಿಗೋ ಹೋತ್"

"ಸರೀಪ್ಪಾ ನೀನ್ ಹೋಗ್"ತ ಕಳ್ಸಿದೊ.

"ಮುತ್ತು, ಮುತ್ತು.... ಬಾ ಇಲ್ಲಿ" ಒಂದೇ ಸಮನೆ ಕರ್‍ದೊ.

"ಇನ್ನ್ ಎರ್ಡೇ ವಡೆ ಉಟ್ಟ್, ಹೊರ್ದು ಬಂದುಬುಟ್ಟೆ ನೆಂಟರ್ ಬಂದ್‌ಬುಟ್ರೆ ಕಷ್ಟ"

"ನೆಂಟ್ರ್ ಇಲ್ಲೆ ಯಾರೂ ಇಲ್ಲೆ ಬೇಗ ಬಾ".

ಒಳಗೆಂದ ಬಂದ ಮುತ್ತವ್ವ ಕಾಗದ ನೋಡಿ "ಯಾರ್ದ್ದ ಕಾಗದ...."ತೇಳಿ ಅವ್ರ ಕೈಯಿಂದ ಎಳ್ಕಂಡ್ ಓದಿದೊ.

"ಅಯ್ಯೋ..." ತೇಳಿ ಕುಸ್ದ್ ಬಿದ್ದೊ.

ಮಾಚಯ್ಯನವು ಗಾಬರಿಂದ ಅವರ್ನ ಮೆಲ್ಲೆ ಸೋಪಾಲಿ ಮಲ್ಗಿಸಿ ಮುಖಕ್ಕೆ ನೀರ್ ಹಾಕಿದೊ. ಕಾಗದ ಕೆಳಗೆ ಬಿದ್ದಿತ್ತ್. ಎತ್ತಿಕಂಡ್ ಓದಿದೊ.

"ಪ್ರೀತಿಯ ಅಪ್ಪಂಗೆ, ನನ್ನ ಕಾಗದ ನೋಡಿ ನಿಮಿಗೆ ಬಾಳಾ ಆಶ್ಚರ್ಯ ಆಗಿರ್ದು. ಇವ್ಳು ಫೋನ್ ಮಾಡ್ದು ಬುಟ್ಟ್ ಕಾಗದ ಯಾಕೆ ಬರ್ದುಟುತ. ನಂಗೆ ಫೋನ್ ಮಾಡಿ ನಿಮ್ಮೊಟ್ಟಿಗೆ ಮಾತಾಡಿಕೆ ಧೈರ್ಯ ಬಾತ್‌ಲೆ. ಅಪ್ಪ-ಅಮ್ಮ ಕ್ಷಮಿಸಿ ಬುಡಿ. ನಾನ್ ನನ್ನ ಲೆಕ್ಚರರ್ ಅಶೋಕನೊಟ್ಟಿಗೆ ಮೈಸೂರಿಗೆ ಹೋಗ್ತಾವಳೆ. ಅವರ್ನೇ ನಾನ್ ಮದ್ವೆ ಆಗಕುತ ವಳೆ. ಅವ್ಕೆ ಇಲ್ಲಿಂದ ಮೈಸೂರಿಗೆ ವರ್ಗ ಆಗುಟ್ಟು. ನಾಳೆ ಮೈಸೂರ್‌ಲಿ ದೇವಸ್ಥಾನಲಿ ನಮ್ಮ ಮದ್ವೆ. ನಿಮಗೆ ಹೇಳಿಕೆ ನಂಗೆ ಧೈರ್ಯ ಇಲ್ಲೆ. ಯಾಕೆತೇಳ್ರೆ ಅಶೋಕ್ ಜಾತಿ ಬೇರೆ. ನೀವು ಒಪ್ಪುದುಲೆತ ಗೊತ್ತ್. ನನ್ನ ನೋಡಿಕೆ ಬರವ್ಕೆ ನಾನೇ ಬೇಡಾತ ತಿಳ್ಸಿದ್ದೆ. ನಿಮಿಗೆಲ್ಲಾ ಬಾಳಾ ನಿರಾಶೆ ಆಗಿರ್ದು. ಅಪ್ಪ ನಾನ್ ಮಾಡ್‌ತಿರ್ವ ಕೆಲ್ಸ ತಪ್ಪುತ ನಂಗೆ ಗೊತ್ತುಟ್ಟು. ಆದರೆ, ಅಶೋಕನ ಬುಟ್ಟ್ ನಾನ್ ಬದ್ಕಿಕೆ ಆದುಲೆತ ಆಗೊಳೆ. ನಿಮ್ಮ ಮುದ್ದಿನ ಮಗಳ ತಪ್ಪುನ ಕ್ಷಮಿಸಿರೆತ ನಂಬಿನೆ. ಅಮ್ಮಂಗೆ ನನ್ನ ಸಾಷ್ಟಾಂಗ ನಮಸ್ಕಾರ ತಿಳ್ಸಿ"

ಕಾಗದ ಓದಿ ಕ್ಷಣಕಾಲ ದಿಗ್ಭ್ರಾಂತಿಂದ ಕುರ್ಚಿಲಿ ಕುಸ್ದ್ ಕುದ್ದ್ ಬುಟ್ಟೊ ಮಾಚಯ್ಯನವು. ನನ್ನ ಸೀಮಾ ಇಂತ ಕೆಲ್ಸ ಮಾಡಿಟ್ಟುತ ನಂಬಿಕೇ ಆತ್‌ಲೆ.

ಮತ್ತೆ ಮತ್ತೆ ಕಾಗದ ನೋಡ್ದೊ. ಹೌದು, ಸೀಮಾಂದೆ ಅಕ್ಷರಗ ಒಬ್ಬಳೇ ಮಗಳುತ ಅಂಗ್ಯೈಲಿಟ್ಟ್ ಸಾಕಿದ್ದೊ. ಆದರೆ ಆ ಹಕ್ಕಿ ಇಂದ್ ರೆಕ್ಕೆ ಬಂದ್ ತನ್ನ ಜೊತೆ ಹಕ್ಕಿಯೊಟ್ಟಿಗೆ ಹಾರಿ ಹೋಗಿತ್ತ್.

* * * * *

"ಹಲೋ ಮಿಸ್"

ತಿರ್ಗಿ ನೋಡ್ತ್ ಸೀಮಾ. ಪೋರ್ಲುನ ಲಕ್ಷಣವಂತ ಹೈದ ಅವಳ ಹಿಂದೆ ನಿತ್ತಿತ್ತ್ ಅನುಮಾನಲಿ" ಹಲೋ..."ತೇಳ್ತ್ ಸೀಮಾ. ನೋಡಿಕೆ ಅಂವ ಈ ಊರಿಗೇ ಹೊಸಬತ ಕಾಂಬತಿತ್ತ್. ಮುಖಲಿ ನಗೆ ತುಂಬಿತ್ತ್.

"ನೀವ್ ಕಾಲೇಜಿಗೆ ಹೋಗ್ತಾ ವರ್ಳಿತ ಕಂಡದೆ"

"ಹೌದು"

"ನಿಮ್ಮ ಕಾಲೇಜ್‌ನ ಇಂಟರ್‌ವ್ಯೂಗೆ ಹೋಗ್ತಾ ವಳೆ. ನಂಗೆ ಸ್ವಲ್ಪ ಕಾಲೇಜ್ ಪ್ರಿನ್ಸಿಪಾಲ್ ರೂಂ ತೋರ್ಸಿರೆನಾ" ಆ ಐದ್ ನಿಮಿಷಲಿ ಅಂವ ನೂರೆಂಟ್ ಮಾತಾಡಿ ಬಿಟ್ಟಿತ್ತ್. ಸೀಮಾ ಅವನ ಮಾತುಗಾರಿಕೆಗೆ ಬೆರಗಾಗಿ ಹೋಗಿತ್ತ್.

ಸೀಮಾ ಆ ಹೈದಂಗೆ ಕಾಲೇಜ್‌ನ ಪ್ರಿನ್ಸಿಪಾಲ್ ರೂಂ ತೋರ್ಸಿ ಅಲ್ಲಿಂದ ಹೊರ್ಟು ಹೋತ್ ಕ್ಲಾಸಿಗೆ.

ಒಂದ್ ವಾರ ಕಳ್ದಿತ್ತ್. ಅಂದ್ ಎಲ್ಲಾ ವಿದ್ಯಾರ್ಥಿಗಳಿಗೂ ಕುತೂಹಲ. ತಮಗೆ ಹೊಸ ಲೆಕ್ಚರರ್ ಬಂದವೆತ ಪ್ರಿನ್ಸಿಪಾಲ್ ಹೇಳಿದ್ದೊ. ಎಲ್ಲವೂ ತಮ್ಮ ಹೊಸ ಲೆಕ್ಚರರ್‌ನ ಕಲ್ಪನೆಲಿ ಮುಳುಗಿದ್ದೊ.

ಲೆಕ್ಚರರ್ ಕ್ಲಾಸ್ ಒಳಗೆ ಬಾಕನ ಎಲ್ಲವ್ಕೂ ಎಲ್ಲಿಲ್ಲದ ಸಂತೋಷ. ಸೀಮಾನ ಮೈ ಮೃದುವಾಗಿ ಕಂಪಿಸಿತ್.

ಹೌದು ಅಂದ್ ನಾನ್ ಪ್ರಿನ್ಸಿಪಾಲ್ ರೂಂ ತೋರ್ಸಿದ್ದ ಹೈದ ಇಂದ್ ಕ್ಲಾಸ್‌ಗೆ ಲೆಕ್ಚರರ್ ಆಗಿ ಬಂದಿತ್ತ್.

ಅಶೋಕ್ ತನ್ನ ವಾಕ್ಚಾತುರ್ಯಂದ ಎಲ್ಲರ ಮನಸ್‌ನ ಸೂರೆಗೊಂಡಿತ್ತ್. ಸೀಮಾನೊಟ್ಟಿಗೆ ಸಲಿಗೆಂದ ಮಾತಾಡ್ತಿತ್ತ್.

ಸೀಮಂಗೆ ಪಾಟ ಕೇಳಿಕೆ ಮನಸ್ಸಾಗದೆ ಕ್ಲಾಸ್‌ಲಿ ಅವನ ಮುಖ ನೋಡಿಕಂಡೇ ಕುದ್ದಿರ್‌ತಿತ್ತ್. ಅಶೋಕನ ರೂಪನಂಗೆ ಅವನ ಹೆಸರ್ ಸಹ ಸುಂದರತ ಅಂದ್ ಕಣ್ತ್. ಸೀಮಾ ಈಗ ಸೀಮಾ ಆಗಿತ್ತ್‌ಲೆ. ಅವಳ ಮನ್ಸ್‌ನ ಅಶೋಕ ಅಪಹರಿಸಿದಂಗೆ

ಅವ್ಳಿಗೆ ಅನುಭವ ಆಗ್ತಿತ್. ಕುದ್ದಲ್ಲಿ ನಿತ್ತಲ್ಲಿ ಅವನ ಸುಂದರ ಮುಖ, ಅವನ ತುಂಟ ಕಣ್ಣ್‌ಗ ಅವನ ಮಾತ್ ಕಣ್ಣಿಗೆ ಕಾಂಬತಿತ್.

ಯಾಕೆ ಹಿಂಗೆ ತಾನ್ ಇದ್ದಕ್ಕಿದ್ದಂಗೆ ದುರ್ಬಲಳಾಗಿ ಬಿಟ್ಟೊಳೆನಾ ಅನ್ಸಿತ್. ಮೊನ್ನೆ ಮೊನ್ನೆ ಮುಟ್ಟ ತನ್ನ ಮನಸ್‌ಲಿ ಪುರುಷನ ಬಗ್ಗೆ ಆಸಕ್ತಿನೇ ಇತ್ತ್‌ಲೆ. ಈಗ ಅಶೋಕ ಅವಳ ಹೃದಯನ ಕೆದಕಿತ್. ಕೆದಕಿದ್ ಮಾತ್ರ ಅಲ್ಲ ದೊಡ್ಡ ದೊಡ್ಡ ಅಲೆನೇ ಎಬ್ಬಿಸಿತ್.

ಅಂದ್ ಕಾಲೇಜ್ ಯೂನಿಯನ್ ಡೇ. ಸೀಮಾ ಅಂತರ್ಜಾತೀಯ ಮದ್ವೆನ ಬಗ್ಗೆ ದೊಡ್ಡದಾಗಿ ಭಾಷಣ ಮಾಡಿ ಎಲ್ಲರ ಮೆಚ್ಚುಗೆ ಗಳ್ಸಿತ್. ದಿನ ಕಳ್ದಂಗೆ ಸೀಮಾ-ಅಶೋಕ ಹತ್ರ ಆಗ್ತಿದ್ದೊ. ಅವರಿಬ್ಬರ ಹೆಸರ್ ಕಾಲೇಜ್ ಗೋಡೆಲಿ ಕಾಂಬಷ್ಟು ಹತ್ರ ಆಗಿದ್ದೊ.

ಕಾಲೇಜ್ ಡೇಗೆ ಅಶೋಕ ಒಂದ್ ನಾಟಕ ರಚಿಸಿತ್. ಸೀಮಾ ಅದರ ನಾಯಕಿ ಅಶೋಕನೇ ನಾಯಕ ಆಗಿತ್. ನಾಟಕ ಹೆಚ್ಚ್ ಕಮ್ಮಿ ಅವರಿಬ್ಬರಿಗೇ ಅನ್ವಯವಾದಂಗೆ ಇತ್.

ಅಂದ್ ಸೀಮಾ ಊಟ ಬೇಡತೇಳಿ ರೂಂಗೆ ಹೋಗಿ ಯೋಚನಾ ಮಗ್ನಳಾತ್. ಅಶೋಕ ತನ್ನನ್ನ ಪ್ರೀತಿ ಮಾಡ್ತಾ ಉಟ್ಟುತ ಅವ್ಳಿಗೆ ಆಗಲೇ ಗೊತ್ತಾಗಿತ್. ಅವನೂ ಅವಳೊಟ್ಟಿಗೆ ಮದ್ವೆಯಾಗೊನತ ಹೇಳಿತ್.

ಆದರೆ ಸೀಮಾಂಗೆ ಅವನ ಜಾತಿ ಪ್ರಶ್ನೆ ಕಾಡಿಕೆ ಶುರು ಆತ್. ಕಡೆಗೆ ತಾನ್ ಕಾಲೇಜ್‌ಲಿ ಮಾಡ್ದ ಭಾಷಣ ಗ್ಯಾನ ಆತ್. ತಾನ್ ಮಾಡ್ತಿರ್ದು ತಪ್ಪಲ್ಲ ಅನ್ಸಿತ್. ದೃಢ ನಿರ್ಧಾರ ಮಾಡಿ ನಿದ್ದೆಗೆ ಜಾರ್ತ್.

ಬೆಳಿಗ್ಗೆ ಏಳ್‌ಕನ ತನ್ನ ನಿರ್ಧಾರದ ಬಗ್ಗೆ ಅವ್ಳಿಗೆ ಬಾಳಾ ಬ್ಯಾನೆ ಆಕೆ ಶುರು ಆತ್. ಆದರೂ ಮನ್ಸ್ ಗಟ್ಟಿ ಮಾಡಿ ಅಶೋಕಂಗೆ ಅವ್ಳ ಒಪ್ಪಿಗೆ ತಿಳ್ಸಿತ್. ಪ್ರೇಮದ ಅಮಲ್‌ಲಿ ಅವ್ಳ ವಿವೇಕ ಜಾರಿತ್. ಅಪ್ಪ-ಅಮ್ಮಂಗೆ ಕಾಗದ ಬರ್ದ್ ಅಶೋಕನೊಟ್ಟಿಗೆ ಹೊರ್ಟಿತ್. ಅಶೋಕಂಗೂ ಮೈಸೂರಿಗೆ ವರ್ಗ ಆಗಿತ್.

* * * * *

ಫೋನ್ ಒಂದೇ ಸಮನೆ ಬಡ್ಕಂಡ್‌ಕನ ಮುತ್ತವ್ವಂಗೆ ಎದೆ ಧಸಕ್‌ತೇಳ್ತ್. ಈಗ ಯಾಕೊ ಎಲ್ಲದಕ್ಕೂ ಅವು ಹೆದರ್ದೇ ಆಗಿತ್. ಮುದ್ದ್‌ಲಿ ಸಾಕಿದ ಮಗ್ಳು ಕೈಕೊಟ್ಟು ಹೋದ ಮ್ಯಾಲೆ ಬದುಕೇ ಕಷ್ಟವಾಗಿ ಬಿಟ್ಟಿತ್.

ಗೋಡೆಲಿ ಇದ್ದ ಮಂಜುನಾಥ ಸ್ವಾಮಿನ ಫೋಟೋದತ್ತ ಕಣ್ಣ್ ಹೋತ್. ಮನ್ಸ್‌ಲಿ ದೇವ್ರನ್ನ ಗ್ಯಾನ ಮಾಡಿಕಂಡ್ ಫೋನ್ ತೆಗ್ತ್.

"ಅಮ್ಮಾ ನಾನ್ ಅಶೋಕ ಸೀಮಾನ ಗಂಡ. ಸೀಮಾಂಗೆ ಆಕ್ಸಿಡೆಂಟ್ ಆಗಿ ಸೀರಿಯಸ್ ಆಗುಟ್ಟು. ನಿಮ್ಮನ್ನ ನೋಡಕುತ ಆಸೆ ಪಡ್ತಾ ಉಟ್ಟು ದಯವಿಟ್ಟು ಬನ್ನಿ"ತ ಹೇಳಿ ಆಸ್ಪತ್ರೆನ ಅಡ್ರೆಸ್ ಹೇಳ್ತ್.

ಮುತ್ತವ್ವಂಗೆ ಕೈಕಾಲೇ ಆಡ್ತ್‌ಲೆ. ಮಾಚಯ್ಯನವು ತೋಟಕ್ಕೆ ಹೋಗಿದ್ದೊ. ಬೇಗ ಅವ್ರ ಮೊಬೈಲಿಗೆ ಫೋನ್ ಮಾಡ್ತ್. ಅವು ತಕ್ಷಣ ಹೊರ್ಟು ಬಂದೊ.

ಮಗಳ್ನ ಮರೆಯಲಾರದೆ ಮರ್ತಿದ್ದ ಹೆತ್ತೊಡಲಿಗೆ ಒಂದ್ ಕ್ಷಣ ಅವ್ಳ ತಪ್ಪುಗಳೆಲ್ಲಾ ಮರ್ತ್ ಹೋಗಿ ಅವ್ರ ಸಿಟ್ಟ್ ಮಾಯವಾತ್. ಭಯಂದ ಅವರ ಶರೀರ ಕಂಪಿಸಿತ್. ಮಗಳಿಗೆ ಏನೂ ಆಗದಿರ್‌ಲಿತ ದೇವ್ರನ್ನ ಪ್ರಾರ್ಥನೆ ಮಾಡ್ದೊ. ಇಬ್ಬರೂ ಅಂದೇ ಮೈಸೂರಿಗೆ ಹೊರ್‍ಟೊ.

ಆಸ್ಪತ್ರೆಲಿ ಡಾಕ್ಟರ್‌ಂದ ವಿಷ್ಯ ತಿಳ್ದಿತ್ತ್. ಆಕ್ಸಿಡೆಂಟ್‌ಲಿ ಸೀಮಾ ತನ್ನ ಕಾಲ್‌ನ ಕಳ್ಕಂಡಿತ್ತ್. ಜೀವಕ್ಕೇನೂ ಅಪಾಯವಿಲ್ಲೆತ ಡಾಕ್ಟರ್ ಹೇಳಿದ್ದೊ.

ಅಪ್ಪ-ಅಮ್ಮನ ಕಾಂಬಕನ ಸೀಮಾ ಬಿಕ್ಕಿ ಬಿಕ್ಕಿ ಮರ್ಡಿಕೆ ಶುರು ಮಾಡ್ತ್. ಅಶೋಕ ಮಾತಾಡದೆ ನಿರ್ವಿಕಾರಲಿ ತಲೆ ತಗ್ಗಿಸಿ ನಿತ್ತಿತ್ತ್. ಇವರ್‍ನ ಕಂಡ್ ಮತ್ತೆ ಬನ್ನೆತ ಹೊರ್ಟು ಹೋಗಿತ್ತ್.

ಸೀಮಾ ಡಿಸ್‌ಚಾರ್ಜ್ ಆಕೆ ಮುಟ್ಟ ಮುತ್ತವ್ವ ಮಗಳ ಹತ್ರಾನೆ ಇದ್ದ್ ನೋಡಿಕಂಡೊ. ಮತ್ತೆ ಅವ್ಳನ್ನ ಮನೆಗೆ ಕರ್‍ಕೊಂಡ್ ಹೋಕೆ ತೀರ್ಮಾನ ಮಾಡ್ದೊ. ಅಶೋಕನ ಅಭ್ಯಂತರ ಏನೂ ಇತ್ತ್‌ಲೆ.

ಅಶೋಕಂಗೆ ಇದ್ರಂದ ಸಮಾಧಾನನೇ ಆತ್‌ತ ಅವ್ನ ಮುಖ ಹೇಳ್ತಿತ್ತ್. ಈಗೀಗ ಅಂವ ಸೀಮಾನ ಮಾತಾಡ್ಸಿಕೇ ಹೋಗ್ತಿತ್ತ್‌ಲೆ. ಮುತ್ತವ್ವನೊಟ್ಟಿಗೆ ವಿಚಾರ್‍ಸಿ ಹಂಗೇ ಕಾಲೇಜಿಗೆ ಹೊರ್ಟು ಹೋಗ್ತಿತ್ತ್. ಇದ್ರಂದ ಸೀಮಾ ಬಾಳಾ ಬೇಜಾರ್ ಮಾಡಿಕಂಡ್ ದುಃಖ ಪಡ್ತಿತ್ತ್. ಅವ್ಳಿಗೆ ತನ್ನ ತಪ್ಪುನ ಅರಿವಾಗಿತ್ತ್. ಇವ್ಳು ಸರಿಯಾಗಿ ಇರ್‍ಕನ ಅಶೋಕ ಬಾಳಾ ಕುಶಿಲಿ ಇರ್ತಿತ್ತ್. ಯಾಗ ಆಕ್ಸಿಡೆಂಟ್ ಆಗಿ ಅವ್ಳ ಕಾಲು ಹೋತೋ ಅಲ್ಲಿಂದ ಅವಂಗೆ ಅವ್ಳಲ್ಲಿ ಆಸಕ್ತಿ ಕಮ್ಮಿಯಾಗಿತ್ತ್.

ಒಂದ್ ತಿಂಗ ಕಳಿಯಕನ ಸೀಮಾ ಬರೀ ಮೂಳೆ ಚಕ್ಕಳ ಮಾತ್ರ ಆಗಿತ್ತ್. ಮನೆಗೆ ಬಂದ ಮ್ಯಾಲೆ ಮುತ್ತವ್ವನ ಆರೈಕೆಲಿ ಅವ್ಳು ಮೈ ಕೈ ತುಂಬಿಕಂಡ್ ಚೇತರ್‍ಸಿಕಂಡತ್.

ಅವ್ಳು ಬಂದ ಮ್ಯಾಲೆ ಅಶೋಕ ಒಂದೆರಡು ಸಲ ಮಾತ್ರ ಫೋನ್ ಮಾಡಿ ವಿಚಾರಿಸಿತ್ತ್. ದಿನ ಕಳ್ದಂಗೆ ಯಾಗೊಳೊ ಒಮ್ಮೆ ಫೋನ್ ಮಾಡ್ದು ಮತ್ತೆ ಹಂಗೆ ಫೋನ್ ಸಹ ನಿತ್ತ್‌ಹೋತ್.

ಕೊನೆಗೆ ಒಂದ್ ದಿನ ಫೋನ್ ಮಾಡ್ದ ಅಶೋಕ, 'ನನ್ನ ಬಾಳ್ ಪೂರ್ತಿ ಕುಂಟಿಯೊಟ್ಟಿಗೆ ಇರಿಕೆ ಆದುಲೆ. ನಂಗೆ ಬೇರೆ ಕಡೆ ವರ್ಗ ಆಗುಟ್ಟ್. ನಿನ್ನ ದಾರಿ ನೀನ್ ನೋಡಿಕತ' ಸೂಕ್ಷ್ಮವಾಗಿ ಹೇಳ್ತ್.

ಸೀಮಾ ದುಃಖಲಿ ಭೂಮಿಗಿಳ್ದ್ ಹೋತ್. ಅವಳಲ್ಲಿ ಒಂದು ರೀತಿನ ತಿರಸ್ಕಾರ ಮೂಡ್ತ್. ಮನಸ್‌ಲಿ ಛಲ ಹುಟ್ಟಿತ್ತ್. ತನ್ನ ಕಾಲ್ ಮ್ಯಾಲೆ ನಿಂತ್ ಸ್ವಾವಲಂಬಿಯಾಕೆ ತೀರ್ಮಾನ ಮಾಡ್ತ್.

* * * * *

ಶುರುನ ದಿನ ವೀಲ್‌ಚೇರ್‌ಲಿ ಬಂದ ಇಕನಾಮಿಕ್ಸ್ ಲೆಕ್ಚರರ್‌ನ ಕಂಡ್ ವಿದ್ಯಾರ್ಥಿಗಳಿಗೆ ತಾತ್ಸಾರ ಮೂಡಿತ್ತ್. ಕ್ರಮೇಣ ಸೀಮಾ ಕಾಲೇಜಿನ ಜೀವನಾಡಿಯಾತ್. ಸೀಮಾ ಈಗ ಕಾಲೇಜ್‌ನ ಜನಪ್ರಿಯ ಲೆಕ್ಚರರ್. ಮಕ್ಕಳಿಗಂತೂ ಅಚ್ಚುಮೆಚ್ಚು. ಅವ್ಳ ಕ್ಲಾಸ್‌ನ ಯಾರೂ ಮಿಸ್ ಮಾಡ್ತಿತ್ತ್‌ಲೆ.

ತನ್ನ ಗತ ಜೀವನದ ಬ್ಯಾನೆನ ಮರಿಯಕೆ ತನ್ನ ಕಾಲೇಜ್ ವಿದ್ಯಾಭ್ಯಾಸನ ಮುಂದುವರ್ಸಿ ಇಕನಾಮಿಕ್ಸ್‌ಲಿ ಎಂ.ಎ. ಮಾಡಿತ್ತ್. ಅಂಗವಿಕಲಳಾದ ಸೀಮಂಗೆ ತಾನ್ ಓದಿದ ಕಾಲೇಜಿಗೆ ಲೆಕ್ಚರರ್ ಆಗಿ ಬಾಧು ಕಷ್ಟ ಆತ್‌ಲೆ. ಯಾಕೆತೇಳ್ರೆ ಎಂ.ಎ. ಲಿ ಅವ್ಳು ಗೋಲ್ಡ್ ಮೆಡಲ್ ಪಡ್ದಿತ್ತ್.

ಈಗವಳು ಅಶೋಕನ ವಿರುದ್ಧ ಪ್ರತೀಕಾರದ ಮನೋಭಾವ ಹೊಂದಿತ್ತ್. ತನ್ನಂತಹ ನಿರ್ಭಾಗ್ಯ ಮಹಿಳೆಯರಿಗೆ ಸಹಾಯ ಮಾಡ್ತಿತ್ತ್.

ಅಂತರ್ಜಾತೀಯ ವಿವಾಹದ ಬಗ್ಗೆ ಮಾಡಿದ್ದ ಭಾಷಣ ಅವ್ಳು ಕಳ್ದಿದ್ದ ಜೀವನನ ನೆನ್ದ್ ನಿಟ್ಟುಸಿರ್ ಬಿಟ್ಟತ್. ಈಗ ಅವ್ಳಿಗೆ ಅರಿವು ಮೂಡಿತ್ತ್. ಆದರೆ ಕಾಲ ಮಿಂಚಿ ಹೋಗಿತ್ತ್. ಅವ್ಳು ಅಪ್ಪ-ಅಮ್ಮಂಗೆ ಆಸರೆಯಾಕೆ ನಿರ್ಧಾರ ಮಾಡಿತ್ತ್.

* * * * *



## ಶ್ರೀಮತಿ ಕಟ್ರತನ ಲಲಿತಾ ಅಯ್ಯಣ್ಣ

ಇವು ಅರಣ್ಯ ಪಾಲಕರಾಗಿದ್ದ ದಿ॥ ಪೊಡನೋಳನ ಸುಬ್ಬಯ್ಯ ಮತ್ತೆ ಕೈಬಿಲಿ ಚೋಂದಮ್ಮ ದಂಪತಿಗಳ ಮಗಳ್. ಇವರ ಪತಿ ಕಟ್ರತನ ಅಯ್ಯಣ್ಣ ನ್ಯಾಯಾಂಗ ಇಲಾಖೆಲಿ ಶಿರಸ್ತೇದಾರರಾಗಿದ್ದ್ ನಿವೃತ್ತರಾಗೊಳೊ. ಇವ್ಕೆ ಮೂರು ಮಕ್ಕ. ಮೊದಲನೆಯವ್ವು ತೇಜಸ್ವಿನಿ, ಮಡಿಕೇರಿ ಸರಕಾರಿ ಹೈಸ್ಕೂಲ್ ಶಿಕ್ಷಕಿ. ಇವರ ಪತಿ ಪರಿಚನ ಕಿರಣ್ ಎಮ್ಮೆಮಾಡು ಸರಕಾರಿ ಹೈಸ್ಕೂಲ್‌ಲಿ ಶಿಕ್ಷಕ. ಎರಡನೇ ಮಗಳು ಯಶಸ್ವಿನಿ, ಇವು ದುಬೈಲಿ ಇಂಜಿನಿಯರಾಗಿರ್ವ ಬೆಳ್ಯನ ಸುನಿಲ್‌ರೊಟ್ಟಿಗೆ ದುಬೈಲಿ ವಾಸವಾಗೊಳೊ. ಮೂರನೆಯಂವ ಮಂಜ ಶಶಿಕಾಂತ್ ಮೆಕ್ಯಾನಿಕಲ್ ಇಂಜಿನಿಯರ್ ಆಗಿ ಬೆಂಗಳೂರ್‌ನ ಕಂಪೆನಿಯೊಂದರ್ಲಿ ಕೆಲ್ಸ ಮಾಡ್ತಾ ಉಟ್ಟು.

ಕತೆ, ಕವನ, ನಾಟಕ ಮತ್ತಿತರ ಲೇಖನಗಳ್ನ ಬರಿಯದು ಇವರ ಹವ್ಯಾಸ. ಇವರ ಹಲವಾರು ಕತೆ ಮತ್ತೆ ಕವನಗ ಪತ್ರಿಕೆಗಳಲ್ಲಿ ಪ್ರಕಟ ಆಗುಟ್ಟು.

"ಅಪೂರ್ವ ಸಂಗಮ" ಕಥಾ ಸಂಕಲನ ಇದ್ ಇವರ ಎರಡನೇ ಪುಸ್ತಕ. ಮೊದಲನೆ ಪುಸ್ತಕ "ಮತ್ತೆ ಸಿಕ್ಕಿತ್ ಕುಂಕುಮ" 2016ರಲ್ಲಿ ಅರೆಭಾಷೆ ಅಕಾಡೆಮಿಂದ ಪ್ರಕಟ ಆಗುಟ್ಟು.

ಇವು ಕೊಡಗು ಕಾಫಿ ಬೆಳೆಗಾರರ ಸಹಕಾರ ಸಂಘಲಿ ಆಂತರಿಕ ಲೆಕ್ಕ ಪರಿಶೋಧಕರಾಗಿದ್ದ್ ಈಗ ನಿವೃತ್ತರಾಗೊಳೊ. ಅಲ್ಲದೆ, ಇವು ಹಲವು ಸಂಘ-ಸಂಸ್ಥೆಲಿ ಸಕ್ರೀಯರಾಗಿದ್ದ್, ಮಡಿಕೇರಿ ಕಾಮಾಕ್ಷಿ ಗೌಡ ಒಕ್ಕೂಟಲಿ ಖಜಾಂಚಿ, ಗೌಳಿಬೀದಿ ಸ್ಪಂದನಾ ಮಹಿಳಾ ಒಕ್ಕೂಟಲಿ ಖಜಾಂಚಿ, ಗೌಳಿಬೀದಿ ಸ್ಪಂದನಾ ಮಹಿಳಾ ಸಂಘಲಿ ಉಪಾಧ್ಯಕ್ಷೆ, ಮಡಿಕೇರಿ ಸಹಕಾರ ಉದ್ಯೋಗಸ್ಥರ ಸಹಕಾರ ಸಂಘಲಿ ನಿರ್ದೇಶಕಿರಾಗೊಳೊ.

ಇವರ ವಿಳಾಸ : ಕಟ್ರತನ ಲಲಿತಾ ಅಯ್ಯಣ್ಣ
ಗೌಳಿಬೀದಿ, ಮಡಿಕೇರಿ., ಮೊ : 7204675925

Printed @ Sri Krishna Printers. Mdk Mob : 94481 35592